# ಸಾವಿನ ಸಮಸ್ಯೆ

(ಸಚಿತ್ರ)

ವೆಂಬಾರ್ ವೆಂಕಟಾಚಾರ್ಯ, ಎಂ.ಎ.

ಕರ್ಣಾಟಕಸಂಘ
ಮಹಾರಾಜರವರ ಕಾಲೇಜು, ಮೈಸೂರು
೧೯೩೧

ನಾಟಕಕ್ಕೆ ಪೂರ್ಣಾಧಿಕಾರಿಗಳು :

ಕೃಷ್ಣ ಮತ್ತು ಕಂಪೆನಿ

ಚಾಮರಾಜ ರಸ್ತೆ, ಮೈಸೂರು



ಮೈಸೂರು :

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಕನ್ನಡದಲ್ಲಿ

ನನಗೆ ಮೊದಲ ಗುರುಗಳಾದ

ಶ್ರೀಮಾನ್ ಹೊಳವನಹಳ್ಳಿ ಶ್ರೀನಿವಾಸಯ್ಯಂಗಾರ್ಯರಿಗೆ

ಈ ನನ್ನ ಕಿರಿಯ ಕಾಣಿಕೆಯನ್ನು

ಭಕ್ತಿಪೂರ್ವಕವಾಗಿ

ಅರ್ಪಿಸಿದೆ.

# ಮುನ್ನುಡಿ

---

ಈಗ ಸುಮಾರು ಎರಡು ವರ್ಷಗಳ ಹಿಂದೆ ಮೈಸೂರು ಮಹಾರಾಜರವರ ಕಾಲೇಜಿನ ವಿದ್ಯಾರ್ಥಿಗಳು 'Twice is too Much' ಎಂಬ ಒಂದು ಇಂಗ್ಲಿಷ್ ನಾಟಕವನ್ನು ಅಭಿನಯಿಸಿದರು. ಹಾಸ್ಯರಸಪೂರ್ಣವಾದ ಆ ನಾಟಕವು ಪ್ರೇಕ್ಷಕರಿಗೆ ವಿಶೇಷ ಆನಂದವನ್ನುಂಟುಮಾಡಿತು. ಇಂಥ ನಾಟಕಗಳು ಕನ್ನಡದಲ್ಲಿ ಅಪೂರ್ವ; ಇದನ್ನು ಏಕೆ ಕನ್ನಡಕ್ಕೆ ಅನುವಾದ ಮಾಡಬಾರದು ಎಂದು ಕೆಲವರ ಮನಸ್ಸಿಗೆ ತೋರಿತು. ಶ್ರೀಮಾನ್ ವಿ. ವೆಂಕಟಾಚಾರ್ಯರು ಆ ನಾಟಕವನ್ನು ಕನ್ನಡದಲ್ಲಿ ಬರೆಯಬೇಕೆಂದು ಉದ್ದೇಶಿಸಿದರು. ಆ ಉದ್ದೇಶದ ಫಲವೇ ಈ 'ಸಾವಿನ ಸಮಸ್ಯೆ.'

ಪರಭಾಷೆಯ, ಪರದೇಶದ ಕಾವ್ಯಗಳನ್ನು 'ಮಕ್ಕೀಕಾಮಕ್ಕಿ'ಯಾಗಿ ಅನುವಾದಮಾಡಬೇಕೆ ಅಥವಾ ಅವುಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ಅವನ್ನು ನಮ್ಮವನ್ನಾಗಿ ಮಾಡಿಕೊಳ್ಳಬೇಕೆ—ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಪರಭಾಷೆಯ ಎಲ್ಲ ಕಾವ್ಯಗಳನ್ನೂ ನಮ್ಮವನ್ನಾಗಿ ಮಾರ್ಪಡಿಸಿಕೊಳ್ಳಲು ಆಗುವುದಿಲ್ಲ. ಮಾರ್ಪಡಿಸಿಕೊಳ್ಳಬಹುದಾದವುಗಳಲ್ಲಿಯೂ ಅಲ್ಲಲ್ಲಿ ಕೀಲು ಹೊಂದಿಕೊಳ್ಳದಿರುವ ಸಂಭ

ವವೂ ಉಂಟು. ಆದರೂ ಹಾಗೆ ಮಾರ್ಪಡಿಸಿಕೊಳ್ಳುವುದರಿಂದ ಬಾಧಕವು ಅಲ್ಪವೆಂದೂ ಸಾಧಕವು ಹೆಚ್ಚೆಂದೂ ತೋರಿದಾಗ ಗ್ರಂಥಕರ್ತರು ಹಾಗೆ ಮಾಡಬಹುದು; ಮಾಡಿಯೂ ಮಾಡು ತ್ತಾರೆ. ಇಂಥ ಸಂದರ್ಭಗಳಲ್ಲಿ ಪಾಠಕರು ಮುಖ್ಯವಾಗಿ ಗಮ ನಿಸಬೇಕಾದದ್ದು, ಮೂಲಕಾವ್ಯದ ಮುಖ್ಯಭಾವವು ಅನುವಾದ ದಲ್ಲಿ ಎಷ್ಟರಮಟ್ಟಿಗೆ ಪ್ರತಿಫಲಿಸಿದೆ ಎಂಬುದು. ಅದೊಂದು ತೃಪ್ತಿಕರವಾಗಿದ್ದರೆ ಮಿಕ್ಕ ವಿಷಯಗಳನ್ನು ಅಲಕ್ಷ್ಯಮಾಡ ಬಹುದು; ಅದು ತೃಪ್ತಿಕರವಾಗಿಲ್ಲದಿದ್ದರೆ ಅನುವಾದಕನ ಪ್ರಯತ್ನವು ವ್ಯರ್ಥ.

ಶ್ರೀಮಾನ್ ವೆಂಕಟಾಚಾರ್ಯರು ಇಂಗ್ಲಿಷ್ ನಾಟಕವನ್ನು ನಮ್ಮದನ್ನಾಗಿ ಮಾರ್ಪಡಿಸಿರುತ್ತಾರೆ. ಹಾಗೆ ಮಾಡುವುದಕ್ಕೆ ಒಂದು ವಿಧವಾದ ಸೌಕರ್ಯವೂ ಉಂಟು. ಮೂಲ ನಾಟಕವು ಇಂಗ್ಲಿಷಿನಲ್ಲಿರುವುದಾದರೂ ಆದರ ಕಥಾವಸ್ತು 'ಅರೇಬಿಯನ್ ನೈಟ್ಸ್' ಕಥೆಗಳಿಂದ ಆರಿಸಿಕೊಂಡದ್ದು; ಅಲ್ಲಿ ಚಿತ್ರಿತವಾಗಿ ರುವ ಜೀವನವು ಪಾಶ್ಚಾತ್ಯಜನರದಲ್ಲ, ಪೂರ್ವದೇಶದ ಜನ ರದು. ಅಲ್ಲದೆ ಕಥೆಯಲ್ಲಿ ಬರುವ ಹಾಸ್ಯರಸಯುಕ್ತವಾದ ಸನ್ನಿವೇಶಗಳನ್ನೂ 'ವಿಕಟಕವಿ'ಯ ಚಿತ್ರ ಸಾಹಸಗಳನ್ನೂ ರಸಿಕನಾದ ರಾಜನ ಉದಾರಭಾವವನ್ನೂ ನೋಡಿದರೆ ತೆನ್ನಾಲಿ ರಾಮಕೃಷ್ಣನ ಕಥೆಗಳು ನೆನಪಿಗೆ ಬರುತ್ತವೆ.

ಈ ಕಾರಣದಿಂದ ನಾಟಕಕರ್ತರು ತೆನ್ನಾಲಿ ರಾಮಕೃಷ್ಣ ನನ್ನೂ ಕೃಷ್ಣದೇವರಾಯರನ್ನೂ ಮುಖ್ಯಪಾತ್ರಗಳನ್ನಾಗಿ ಏರ್ಪ

ಡಿಸಿಕೊಂಡು ಮಿಕ್ಕ ಪಾತ್ರಗಳಿಗೂ ಉಚಿತವಾದ ಹೆಸರನ್ನು ಜೋಡಿಸಿ ಸನ್ನಿವೇಶಗಳಲ್ಲೂ ಸಂಭಾಷಣೆಗಳಲ್ಲೂ ನಮ್ಮ ಸಮಾಜದ ನಡೆನುಡಿಗಳಿಗೆ ಒಪ್ಪುವಂತೆ ವ್ಯತ್ಯಾಸಗಳನ್ನು ಮಾಡಿಕೊಂಡು 'ಸಾವಿನ ಸಮಸ್ಯೆ' ಎಂಬ ಹೆಸರನ್ನಿಟ್ಟು ಈ ನಾಟಕವನ್ನು ಕಟ್ಟಿದ್ದಾರೆ.

ಈ ನಾಟಕದ ಗುರಿ ಬರಿಯ ವಿನೋದ. ಸಮಾಜ, ನೀತಿ, ಮತ, ಧರ್ಮ ಮೊದಲಾದವುಗಳಿಗೆ ಸಂಬಂಧಿಸಿದ ಲೋಪದೋಷಗಳನ್ನು ಎತ್ತಿಹಾಕಬೇಕೆಂಬ ಉದ್ದೇಶವಾಗಲಿ ಅದಕ್ಕೆ ಆವಶ್ಯಕವಾದ ಕಟುಹಾಸ್ಯವಾಗಲಿ ಇದರಲ್ಲಿಲ್ಲ. ವಿನೋದವೇ ಉದ್ದೇಶವಾಗಿದ್ದರೂ ಇಲ್ಲಿಯ ಹಾಸ್ಯದಲ್ಲಿ ಅಶ್ಲೀಲತೆಯಿಲ್ಲ. ಸಂಜೆಯಲ್ಲಿ ಒಂದೆರಡು ಘಂಟೆಗಳ ಕಾಲ ಹಾಯಾಗಿ ಕುಳಿತು ಈ ಕಾಲ್ಪನಿಕ ಪ್ರಪಂಚದಲ್ಲಿ ಬೆರೆದು ಜನರು ದಿನಚರಿಯ ವ್ಯವಹಾರದ ಕ್ಲೇಶವನ್ನೂ ಬೇಸರವನ್ನೂ ಮರೆತುಬಿಡಲು ಸಾಧ್ಯವಾದರೆ ಇಂಥ ನಾಟಕದ ಉದ್ದೇಶವು ನೆರವೇರಿದಂತಾಗುತ್ತದೆ.

ಕರ್ಣಾಟಕ ಸಾಹಿತ್ಯ ಸಮ್ಮೇಳನವು ಹೋದ ವರ್ಷ ಮೈಸೂರಿನಲ್ಲಿ ನೆರೆದಾಗ ನಮ್ಮ ಸಂಘದ ಸದಸ್ಯರು ಈ ನಾಟಕವನ್ನು ಪ್ರದರ್ಶಿಸಿದರು. ಸಮ್ಮೇಳನಕ್ಕೆ ಬಂದಿದ್ದ ಮಹಾಜನರು ಇದನ್ನು ನೋಡಿ ಸಂತೋಷದಿಂದ ಪ್ರಶಂಸಿಸಿದರು. ಅದರಿಂದ ಪ್ರೋತ್ಸಾಹಿತರಾಗಿ ಈ ಗ್ರಂಥವನ್ನು ಪ್ರಕಟಿಸಿರುತ್ತೇವೆ. ಹೀಗೆ ಪ್ರಕಟಿಸುವುದಕ್ಕೆ ಅನುಮತಿಯನ್ನು ಕೊಟ್ಟದ್ದಕ್ಕಾಗಿ ಸಂಘದ

ವರು ಶ್ರೀಮಾನ್ ವೆಂಕಟಾಚಾರ್ಯರವರಿಗೆ ಅತ್ಯಂತ ಕೃತಜ್ಞ ರಾಗಿರುತ್ತಾರೆ.

ಕರ್ಣಾಟಕಸಂಘ
ಮಹಾರಾಜರವರ ಕಾಲೇಜು,
ಮೈಸೂರು.
ಪ್ರಜೋತ್ಪತ್ತಿ ಸಂ|| ಭಾದ್ರಪದ
ಶುದ್ಧ ೨.

**ಟಿ. ಎಸ್. ವೆಂಕಣ್ಣಯ್ಯ,**
ಉಪಾಧ್ಯಕ್ಷ.



೧೯೩೦ನೆಯ ಇಸವಿ ಅಕ್ಟೋಬರ್ ೫ನೆಯ ತಾರೀಖಿನ ದಿನ

ಮೈಸೂರಿನಲ್ಲಿ ನಡೆದ ಹದಿನಾರನೆಯ

ಕರ್ಣಾಟಕ ಸಾಹಿತ್ಯ ಸಮ್ಮೇಳನದ ಸಮಯದಲ್ಲಿ

ಈ ನಾಟಕವನ್ನು ಮೊದಲ ಸಲ ಅಭಿನಯಿಸಿದಾಗ

## ಪಾತ್ರ ವಹಿಸಿದವರು

---

| | | |
|---|---|---|
| ರಾಮಕೃಷ್ಣ | ಶ್ರೀಮಾನ್ | ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ. |
| ಗೌರಿ | ,, | ಭೂಪಾಳಂ ಪುಟ್ಟನಂಜಪ್ಪ, ಬಿ.ಎ. |
| ಈಶ್ವರಯ್ಯ | ,, | ಎ. ಎಂ. ನಟೇಶಮೊದಲಿಯಾರ್, ಎಂ.ಎ |
| ಚಿನ್ನಾದೇವಿ | ,, | ಬಿ ಕೃಷ್ಣಮೂರ್ತಿ, ಬಿ.ಎ. |
| ಪುಟ್ಟಮ್ಮಣ್ಣಿ | ,, | ಎಸ್. ನಾಗೇಶರಾವ್, ಬಿ.ಎ. |
| ಮೊದಲನೆಯ ವರ್ತಕ | ,, | ಎನ್. ಶ್ರೀನಿವಾಸಮೂರ್ತಿ, ಬಿ.ಎ. |
| ಎರಡನೆಯ ವರ್ತಕ | ,, | ಎಚ್. ಆರ್. ಕೇಶವಮೂರ್ತಿ, ಎಂ.ಎ. |
| ಮೂರನೆಯ ವರ್ತಕ | ,, | ಎ. ವಿ. ಶ್ರೀಕಂಠಯ್ಯ |
| ಕೃಷ್ಣದೇವರಾಯ | ,, | ವಿ ಕೆ. ಶ್ರೀನಿವಾಸನ್, ಬಿ.ಎ. |
| ತಿಮ್ಮಪ್ಪಾಜಿ | ,, | ಜಿ. ಪಿ. ರಾಜರತ್ನಂ, ಎಂ.ಎ. |
| ಚಾರ | ,, | ಎಂ. ಎಸ್. ರಂಗಸ್ವಾಮಿ ಅಯ್ಯಂಗಾರ್, ಬಿ.ಎ. |
| "ಮಾರೀಚ" ರಾಮಯ್ಯ | ,, | ಎಸ್. ಎಲ್. ಶ್ರೀಕಂಠಯ್ಯ |



# ಪಾತ್ರಗಳು

| | |
|---|---|
| ಕೃಷ್ಣದೇವರಾಯ | ವಿಜಯನಗರದ ಸಾರ್ವಭೌಮ |
| ತಿಮ್ಮಪ್ಪಾಜಿ | ಆತನ ಮಂತ್ರಿ |
| ಈಶ್ವರಯ್ಯ | ಆಸ್ಥಾನದ ಅಮಾನ |
| ರಾಮಕೃಷ್ಣ | ಆಸ್ಥಾನದ ವಿಕಟಕವಿ |
| "ಮಾರೀಚ" ರಾಮಯ್ಯ | ಗೂಢಚಾರ |
| ಚಿನ್ನಾದೇವಿ | ಕೃಷ್ಣದೇವರಾಯನ ಪಟ್ಟಮಹಿಷಿ |
| ಪುಟ್ಟಮ್ಮಣ್ಣಿ | ಆಕೆಯ ಚೇಟಿ |
| ಗೌರಿ | ರಾಮಕೃಷ್ಣನ ಹೆಂಡತಿ |

ಮೂರು ಜನ ವರ್ತಕರು

ಚಾರ

ಸ್ಥಳ : ವಿಜಯನಗರ



# ಸಾವಿನ ಸಮಸ್ಯೆ

## ಮೊದಲನೆಯ ದೃಶ್ಯ

[ವಿಜಯನಗರದಲ್ಲಿ ತೆನ್ನಾಲ ರಾಮಕೃಷ್ಣನ ಮನೆಯ ಪಡಸಾಲೆ. ಹಿಂದಿನ ಗೋಡೆಗೆ ಸೇರಿದಂತೆ ಮಧ್ಯಕ್ಕೆ ಒಂದು ಜಗುಲಿ. ಅದರ ಮೇಲೆ ಎರಡು ಮಣೆಗಳಿರುವುವು. ಜಗುಲಿಯ ಎಡಗಡೆಯ ಅಂಚಿನಲ್ಲಿ ಕುಳಿತು ಗೌರಿಯು ರವಿಕೆಯನ್ನು ಕಸೂತಿ ಕೆಲಸಮಾಡಿ ಹೊಲಿಯುತ್ತಾ ಇರುವಳು. ಬಲಗಡೆ ಒಂದು ಬಾಗಿಲು. ಬಾಗಿಲಿನ ಪಕ್ಕಕ್ಕೆ ಹಿಂದಕ್ಕೆ ಒಂದು ಕಿಟಕಿ ಇರುವುದು. ಬಾಗಿಲಿಂದ ತೆನ್ನಾಲ ರಾಮಕೃಷ್ಣನು ಒಳಗೆ ಬರುವನು. ಮುಖವು ಜೋಲುಬಿದ್ದಿರುವುದು.]

ರಾಮಕೃಷ್ಣ—ಉಸ್ಸಪ್ಪಾ! ಸುತ್ತಿ ಸುತ್ತಿ ಸಾಕಾಯಿತು. ಒಂದು ಕಾಸು ಕೂಡ ಸಂಪಾದನೆಯಾಗಲಿಲ್ಲ. ನನ್ನ ಹಾಸ್ಯವೆಲ್ಲ ಜನಗಳಿಗೆ ಹಳಸಿದ ತಂಗಳಿನಂತಾಗಿ ಬಿಟ್ಟಿದೆ. ಮೊದಲು ನಾನು ಎಲ್ಲಿ ಹೋದರೂ, 'ಬನ್ನಿ ಶಾಸ್ತ್ರಿಗಳೇ' ಎಂದು ಮಣೆ ಹಾಕಿ ದಕ್ಷಿಣೆ ತಾಂಬೂಲ ಕೊಟ್ಟು ಬಹುಮಾನ ಮಾಡುತಿದ್ದರು. ಈಗ ಆ ಬಹುಮಾನ ಹೋಗಿ ಬಹು ಅವಮಾನಕ್ಕೆ ಪ್ರಾರಂಭವಾಗಿದೆ. (ಮುಖ ಸಿಂಡರಿಸಿಕೊಂಡು) ಅಲ್ಲ, ಅದೇನು ದುರಾಗತ ಆ ಶನಿ ಈಶ್ವರಯ್ಯನದು? ನಡು ಬೀದೀಲಿ ಅವಮಾನ ಮಾಡೋದು ಅಂದರೇನು? ಇರಲಿ, ಇರಲಿ, ತಕ್ಕ ಶಾಸ್ತಿಮಾಡುತೇನೆ ಅವನಿಗೆ. (ಹೆಂಡತಿಯ ಕಡೆ ನೋಡಿ, ಮೆಲ್ಲಗೆ) ಏನೇ! ಏನಾದರೂ ಇದೆಯೇನೇ ಮನೇಲಿ? ಬಹಳ ಹಸಿವಾಗುತ್ತೆ ಕಾಣೆ!

ಗೌರಿ—(ಗಂಡನನ್ನು ನೋಡಿ ಏಳುತ್ತಾ) ಏನು, ಹಸಿವೇ? ಹೌದು ಹೌದು, ಅದೇನೋ ‘ಬರಗಾಲಕ್ಕೆ ಬೆನ್ನೆಲ್ಲಾ ಹೊಟ್ಟೆಯಾಯಿತು’ ಅನ್ನೋ ಹಾಗೆ ಮನೇಲಿ ಒಂದು ಹಿಡಿ ಅಕ್ಕಿ ಕೂಡ ಇಲ್ಲದೆ ಹೋದಹಾಗೆಲ್ಲ ನಿಮಗೆ ಎಳೇ ಮಕ್ಕಳಂತೆ ಮೂರು ಮೂರು ಹೊತ್ತು ಹಸಿವಾಗೋದಕ್ಕೆ ಪ್ರಾರಂಭವಾಯಿತು. ಏನೋ ನೀವು ಕೈತುಂಬ ಸಂಪಾದಿಸಿಕೊಂಡುಬಂದದ್ದನ್ನ ನಾನು ಬೊಗಸೆಬೊಗಸೇಲಿ ಬಾಚಿಹಾಕಿಕೊಂಡು ಮನೇಲಿ ಸೇರಿಸಿಟ್ಟ ಹಾಗೆ ಮಾತಾಡುತೀರಲ್ಲಾ! ಅಕ್ಕಿಯಿಲ್ಲ, ಬೇಳೆಯಿಲ್ಲ, ಏನು ಮಾಡಿಡಲಿ ನಿಮಗೆ ನಾನು? ಹಸಿವಾದರೆ ನಿರ್ಜಲೇಕಾದಶಿ ವ್ರತ ಮಾಡಿ ಇವತ್ತಾದರೂ; ಪುಣ್ಯ ಬರುತ್ತೆ. ನನಗೆ ಯಾಕೋ ಸಾಕಾಗಿ ಹೋಗಿದೆ ಈ ಸಂಸಾರ. (ಎಂದು ಹಂಗಿಸುವಂತೆ ಮಾತಾಡುವಳು.)

ರಾಮಕೃಷ್ಣ—ನೋಡು ಗೌರಿ, ನೀನು ಹೀಗೆಲ್ಲಾ ಸುಮ್ಮನೆ ನನ್ನ ಬೈಯಬೇಡ. ಈ ನಮ್ಮ ಬಡತನವೆಲ್ಲಾ ಯಾಕೋ ನಾನು ಮಾಡಿದ ತಪ್ಪೆಂದೇ ಭಾವಿಸಿ ಮಾತಾಡುತೀಯಲ್ಲೇ. ಅಲ್ಲ,—ನನ್ನ ಹಾಸ್ಯಗಳು, ನನ್ನ ಕವನಗಳು, ಎಲ್ಲಾ ಆರು ತಿಂಗಳಿಗೇನೇ ಹಳೇ ಮುಗ್ಗಿದ ವಾಸನೆ ಹೊಡೆದರೆ ಅದಕ್ಕೆ ನಾನೇನು ಮಾಡಲಿ? ಇನ್ನು ಆ ಅರಮನೆ ವಿಚಾರವೋ ಹಾಗಾಯಿತು: ಆ ರಾಜಗುರು ತಾತಾಚಾರೀನ, ಏನೋ ಮಹಾ ದೊಡ್ಡಮನುಷ್ಯ ಉಪಕಾರಮಾಡುತಾನೆ ಎಂದು ನಂಬಿ ನನ್ನ ಕವನಗಳನ್ನೆಲ್ಲಾ ಅವನ ಕೈಲಿ ಕೊಟ್ಟರೆ— ಎಷ್ಟಾದರೂ ಬೇರೆ ಊರಿನವರ ಮೇಲೆ ಹೊಟ್ಟೆಕಿಚ್ಚು ಎಲ್ಲಿ ಹೋಗುತ್ತೆ?—ನನ್ನ ಒಳ್ಳೆಯ ಕವನಗಳನ್ನೆಲ್ಲಾ

ಬಚ್ಚಿಟ್ಟು ನಾನು ಹುಡುಗತನದಲ್ಲಿ ಮೊದಮೊದಲು ಬರೆದಿದ್ದ ಯಾವುದೋ ಒಂದು ಶ್ಲೇಷಾಲಂಕಾರ ಇರೋ ಪದ್ಯಾನ ಮಹಾರಾಜರಿಗೆ ತೋರಿಸಿ, ಅದಕ್ಕೆ ಅರ್ಥ ಮಾಡುವಾಗ ಗೂಬೆಗೂ ಮಹಾರಾಜರಿಗೂ ಅನ್ವಯಮಾಡಿ ಅರ್ಥ ಹೇಳಿ, ಅವರಿಗೆ ನನ್ನ ಮೇಲೆ ಕೋಪ ಬರೋ ಹಾಗೆ ಮಾಡಿದ. ಊರು ಬಿಟ್ಟು, ದೇಶ ಬಿಟ್ಟು, ಏನೋ ಮಹಾ ಈ ರಾಜಾಸ್ಥಾನದಲ್ಲಿ ನನ್ನ ವಿದ್ಯೆಗೆ ತಕ್ಕ ಗೌರವ ಸಿಕ್ಕುತ್ತೆ ಎಂದು ಬಂದರೆ ಇಲ್ಲಿ ಗೌರವಕ್ಕೆ ಬದಲಾಗಿ ಅವಮಾನವಾಗೋ ಹಾಗೆ ಕಾಣುತ್ತೆ.

ಗೌರಿ—ಸಾಕು ಸುಮ್ಮನಿರಿ ಅಂದರೆ! ಇದು ನೂರೊಂದನೆ ಸಲ ಹೀಗೆ ಹೇಳೋದು ನೀವು.

ರಾಮಕೃಷ್ಣ—ಹಾಗೇ ಸರಿ ಎಂತ ಒಪ್ಪಿಕೊಳ್ಳೋಣ. ಆದರೆ ಈ ವಿಚಾರದಲ್ಲಿ ನನ್ನದೆಷ್ಟು ತಪ್ಪಿದೆಯೋ ನಿನ್ನದೂ ಅಷ್ಟೇ ಇದೆ. ನೋಡು, ನಿನ್ನ ಕಸೂತಿ ಕೆಲಸವೆಲ್ಲಾ ಕಾಡಿನಲ್ಲಿ ಕೋಗಿಲೆ ಅಳೋಹಾಗಾಗಿದೆ. ನಾವು ತೆನಾಲಿ ಬಿಟ್ಟು ಈ ಊರಿಗೆ ಬಂದು ಆರು ತಿಂಗಳಾಯಿತಲ್ಲ, ಮಹಾರಾಣಿಯವರೇನಾದರೂ ನಿನ್ನನ್ನ ಕರೆಸಿ ನಿನ್ನ ಕಸೂತಿ ಕೆಲಸಕ್ಕೆ ಬಹುಮಾನ ಕೊಟ್ಟರೇ, ಅಥವಾ ಬೇರೆ ಏನಾದರೂ ಒಂದು ಕಾಸು ಸಂಪಾದಿಸಿ ತಂದು ಹಾಕಿದೀಯಾ ನೀನು ಈ ಮನೆ ಸಂಸಾರ ನೀಸೋದಕ್ಕೆ ?

ಗೌರಿ—ಇದೀಗ ಬಹಳ ಚೆನ್ನಾಯಿತು. ಮನೆಗೆ ಸಂಪಾದಿಸಿ ತಂದು ಗಿಂದು ಹಾಕೋದೆಲ್ಲಾ ನಿಮ್ಮಂಥಾ ಗಂಡಸರ ಕೆಲಸವಲ್ಲದೆ, ಹೆಣ್ಣು ಹೆಂಗಸಿನ ಕೆಲಸವಲ್ಲ ಹೊರಗೆ ದುಡಿದು

ದುಡ್ಡು ತರೋದು ! ನಿಮಗೆ ಸಂಪಾದನೆ ಮಾಡೋದಕ್ಕೆ ಕೈಲಾಗದಿದ್ದರೆ ಹೋಗಿ ಸಾಲಮಾಡಿ ಸಾಮಾನು ತಂದು ಹಾಕಿ, ನನಗೇನು !

ರಾಮಕೃಷ್ಣ—ಯಾರೇ ಸಾಲ ಕೊಡೋರು, ಈಗ ಮಾಡಿರೋ ಹಳೇ ಸಾಲಾನೇ ತೀರಿಸದಿದ್ದರೆ? ಹೆಂಗಸರಿಗೇನು, ಮನೇಲಿ ಕೂತುಕೊಂಡು ಮಾರುದ್ದ ಮಾತಾಡಿಬಿಡಬಹುದು ; ಹೊರಗೆ ದುಡಿಯೋ ಗಂಡಸಿಗಲ್ಲವೆ ಆ ಕಷ್ಟ ಸುಖ ಎಲ್ಲಾ ತಿಳಿಯೋದು ? ಆ ಸಾಲ ಮಾಡಿ ತಿನ್ನೋದೂ ಸಾಕು, ಆ ನಡುಬೀದೀಲಿ ಅವಮಾನವೂ ಸಾಕು. ಇವತ್ತು ನನಗಾದ ಅವಮಾನಕ್ಕೆ ಇನ್ನೊಬ್ಬನಾಗಿದ್ದರೆ ಪ್ರಾಣ ಬಿಡುತಿದ್ದ.

ಗೌರಿ—ಏನವಮಾನವಾಯಿತು ನಿಮಗೆ ?

ರಾಮಕೃಷ್ಣ—ಏನೇ ?—ರಾಜಬೀದೀಲಿ ಹೋಗುತಿರೋವಾಗ ಸಾವಿರಾರು ಜನರೆದುರಿಗೆ ಸಹಸ್ರನಾಮವಾಯಿತು. ಆ ಮೋತೀಖಾನೆ ಅಮಿಾನ ಈಶ್ವರಯ್ಯ ಇದಾನಲ್ಲ ; ಅವನು, ನಾವು ಈ ಊರಿಗೆ ಬಂದ ಹೊಸದರಲ್ಲಿ ಮೋತೀಖಾನೇಲಿ ಯಾವುದೋ ಕೆಲವು ಸಾಮಾನು ತೆಗೆದುಕೊಂಡದ್ದರ ಬಾಕಿ ಇನ್ನೂ ಕೊಡಲಿಲ್ಲ ಅಂತ ನಡುಬೀದೀಲಿ ರಟ್ಟೆ ಹಿಡಿದು ನಿಲ್ಲಿಸಿ, ತಲೇಮೇಲಿದ್ದ ರುಮಾಲು ಕೆಡವಿ ಸಿಕ್ಕಿದ ಹಾಗೆ ಬೈದ. ಎಲಾ ಮಹಾರಾಯ, ಇನ್ನೊಂದೆರಡು ದಿನ ತಾಳಯ್ಯಾ, ಕೊಡುತೇನೆ, ಈಗ ಕೈಲಿ ಕಾಸಿಲ್ಲ ಅಂದರೆ, 'ಕೈಲಿ ಕಾಸಿಲ್ಲದಿದ್ದರೆ ಮನೆಗೆ ಹೋಗಿ ಹೆಂಡತಿ ಮೈಮೇಲಿರೋ

ಒಡವೇನ ಮಾರಿ ಸಾಲ ತೀರಿಸು, ಎಂದು ತಳ್ಳಿ ಬಿಟ್ಟ. ಇನ್ನಿದಕ್ಕಿಂತಲೂ ಅವಮಾನ ಬೇಕೆ?

ಗೌರಿ—ಏನು, ಏನು, ಹೆಂಡತಿ ಮೈಮೇಲಿರೋ ಒಡವೇನ ಮಾರಹೇಳೋದಕ್ಕೆ ಇವನಿಗೇನಧಿಕಾರ?....

ರಾಮಕೃಷ್ಣ—ಏನೂ ಇಲ್ಲ!

ಗೌರಿ—ಅಂಥ ದುರಹಂಕಾರಿಗಳಿಗೆ ಅಧಿಕಾರ ಕೊಡೋದು ಚೇಳಿಗೆ ಪಾರುಪತ್ಯ ಕೊಟ್ಟಹಾಗೆ. ಅಲ್ಲ,—ಅವನು ಹಾಗಂದರೆ ಅಲ್ಲೀ ಅವನಿಗೆ ತಕ್ಕ ಶಾಸ್ತಿ ಮಾಡಿಬಿಡಬೇಡವೆ ನೀವು?

ರಾಮಕೃಷ್ಣ—ಶಾಸ್ತೀನೇ!—ಅವನಿಗೆ ತಕ್ಕ ಶಾಸ್ತಿ ಮಾಡದಿದ್ದರೆ ನಾನು ತೆನ್ನಾಲ ರಾಮಕೃಷ್ಣ ಅಂತ ಯಾಕೆ ಕರೆಸಿಕೋಬೇಕು ಇನ್ನು? ಆದರೆ ನೋಡು, ಈಗ ನಮ್ಮ ಸ್ಥಿತಿ ಸ್ವಲ್ಪ ಹೀನವಾಗಿದೆ; ಅವನಿಗೆ ಏನು ಶಾಸ್ತಿ ಮಾಡಬೇಕಾದರೂ ಉಪಾಯದಿಂದ ಆಗಬೇಕು. ನಾನಾಗಲೇ ಅದಕ್ಕೆ ದಾರಿ ಹುಡುಕಿದೇನೆ: 'ಮನೆಗೆ ಬಾರಯ್ಯ, ಸಾಲ ತೀರಿಸುತೇನೆ' ಎಂದು ಹೇಳಿ ಬಂದೆ. ಇನ್ನೇನು ಕೊಂಚ ಹೊತ್ತಿಗೆಲ್ಲಾ ಇಲ್ಲಿಗೆ ಬರುತಾನೆ. ಆಗ ಏನಾದರೂ ಮಾಡಬೇಕು ನೋಡು. ನನಗೆ ಆದ ಹಾಗೆ ಅವನಿಗೂ ನಡು ಬೀದೀಲಿ ಅವಮಾನವಾಗಬೇಕು....ಹೂಂ, ಆದಿರಲಿ. ಎಲ್ಲಿ, ಏನಾದರೂ ಕೊಡು ಮತ್ತೆ, ಬಹಳ ಹಸಿವಾಗುತ್ತೆ! (ಎಂದು ಹೆಂಡತಿಯನ್ನು ಅಂಗಲಾಚುವನು.)

ಗೌರಿ—ಊಂ, ಏನೋ ಇದೊಂದು ಸಲ ಪಾಪ ಅಂತ ಸುಮ್ಮನಿರುತೇನೆ. ಇನ್ನು ಮೇಲೆ ಬರೀ ಕೈಲಿ ಬಂದರೆ ಬರೀ

ಹೊಟ್ಟೇಲಿರಬೇಕಾದೀತು. (ಎಂದು ಅರ್ಧ ನಗುತ್ತಾ, ಅರ್ಧ ಹಂಗಿಸುತ್ತಾ ಹೇಳಿ ಒಳಗೆ ಹೋಗಿ ಒಂದು ಬಿಡಿಎಲೆಯಲ್ಲಿ ಒಂದು ದೋಸೆಯನ್ನೂ ತಂಬಿಗೆಯಲ್ಲಿ ನೀರನ್ನೂ ತಂದು ಮಣೆಯ ಮೇಲಿಡುವಳು.)

ರಾಮಕೃಷ್ಣ—(ರುಮಾಲನ್ನೂ ಉತ್ತರೀಯವನ್ನೂ ತೆಗೆದಿಟ್ಟು ಪಕ್ಕದ ಮಣೆಯ ಮೇಲೆ ಕುಳಿತುಕೊಂಡು) ನೀನೂ ಕೂತುಕೋ, ಸ್ವಲ್ಪ ತಿನ್ನುವಿಯಂತೆ. (ಎಂದು ಹೇಳುತ್ತಾ, ಕೈ ತೊಳೆದುಕೊಂಡು ಒಂದು ಚೂರು ದೋಸೆಯನ್ನು ಬಾಯಿಗೆ ಹಾಕಿಕೊಳ್ಳುವನು. ಅಷ್ಟರಲ್ಲಿ ಬಾಗಿಲು ತಟ್ಟಿದ ಶಬ್ದವಾಗುವುದು.) ಓಹೋ, ಬಂದೇ ಬಿಟ್ಟೆ ಆಗಲೇ! ಏನುಮಾಡೋಣ ಈಗ? (ಎಂದು ಅವಸರದಿಂದ ಏಳುವನು.)

ಗೌರಿ—ಇಲ್ಲಿ ನೋಡಿ ಅಂದರೆ, ಹ್ಯಾಗಿದ್ದರೂ ಮಧ್ಯಾಹ್ನದ ಹೊತ್ತು, ಬ್ರಾಹ್ಮಣ ಮನೆಗೆ ಬರುತಾನೆ. ಮನೇಲಿ ಒಂದಿಷ್ಟು ಚೂರೋ ಪಾರೋ ಕಲ್ಲುಸಕ್ಕರೆ, ಯಾಲಕ್ಕಿ ಎಲ್ಲಾ ಇರಬೇಕು. ಒಂದೆರಡು ಲೋಟ ಚೆನ್ನಾಗಿ ಪಾನಕ ಮಾಡಿಬಿಟ್ಟು ಅದರಲ್ಲಿ ಕೊಂಚ ಅಫೀಮು....

ರಾಮಕೃಷ್ಣ—(ಆಶ್ಚರ್ಯಕೋಪಗಳಿಂದ ಕೂಡಿದ ಗದರಿಸುವ ಧ್ವನಿಯಲ್ಲಿ) ಅಫೀಮೂ....?

ಗೌರಿ—ಅಯ್ಯೋ, ಅವತ್ತು ನೀವು ಹಲ್ಲುನೋವಿಗೆ ಪಟ್ಟುಹಾಕೋದಕ್ಕೆ ಅಂತ ಸ್ವಲ್ಪ ಅಫೀಮು ತಂದಿರಲಿಲ್ಲವೇ?....

ರಾಮಕೃಷ್ಣ—ಓ....

ಗೌರಿ—ಅದರಲ್ಲಿ ಒಂದು ಕಾಳಿನಷ್ಟು ಮಿಕ್ಕಿದೆ; ಇಲ್ಲದಿದ್ದರೆ ಆಫೀಮೆಲ್ಲಿಂದ ಬರಬೇಕು ನಮ್ಮ ಮನೇಲಿ!

ರಾಮಕೃಷ್ಣ—ಹೂಂ, ಸರಿ, ಸರಿ.

ಗೌರಿ—ಅದನ್ನ ಪಾನಕದಲ್ಲಿ ಸೇರಿಸಿಬಿಟ್ಟು ಕುಡಿಯೋದಕ್ಕೆ ಕೊಡೋಣ. ಅದನ್ನು ಕುಡಿದು ಅವನು ಬೀದಿಗೆ ಹೋದರೆ ಎಲ್ಲಾದರೂ ಮೈಮರೆತು ಬಿದ್ದುಕೊಳ್ಳುತಾನೆ. ಆಗ ಬೀದೀ ಜನರೆಲ್ಲಾ ನೋಡಿ ನಕ್ಕರೆ ಅವನಿಗೆ ತಕ್ಕ ಶಾಸ್ತಿಯಾಗುತ್ತೆ. ಏನಂತೀರಿ ಇದಕ್ಕೆ ?

(ಬಾಗಿಲು ಪುನಃ ಸದ್ದಾಗುವುದು.)

ರಾಮಕೃಷ್ಣ—ಭಲೆ, ಒಳ್ಳೇ ಯೋಚನೆ. ಹಾಗೇ ಆಗಲಿ. (ಎಂದು ಆ ಮೇಲೆ ಮೂದಲಿಸುವ ಧ್ವನಿಯಲ್ಲಿ) ಅಲ್ಲ ಕಾಣೆ, ಮನೇಲಿ ಏನೂ ಇಲ್ಲವೇ ಇಲ್ಲ ಎಂತ ಈಗ ತಾನೇ ಹೇಳಿದೆ. ಈಗ ಈ ಪಾನಕದ ಸಾಮಾನು ಎಲ್ಲಿಂದ ಬಂತು ? ಮೇಲಿನಿಂದ ಇಳೀತೇನೋ !

ಗೌರಿ—ಅದೆಲ್ಲಾ ಕೇಳಬಾರದು ಅಂದರೆ; ಸಂಸಾರದ ಗುಟ್ಟು. ಮನೇಲಿ ಮೂರು ಕಾಳಿಲ್ಲ ಅಂದರೂ ಮೂರು ಕೊಳಗದಷ್ಟಾದರೂ ಇದ್ದೇ ಇರುತ್ತೆ. ಅಷ್ಟು ಮುಂದಿನ ಯೋಚನೆ ಇಲ್ಲದಿದ್ದರೆ ಹೆಂಗಸರು ಮನೇ ಯಜಮಾನಿಕೆ ನಡಿಸೋದು ಹ್ಯಾಗೆ ?

(ಪುನಃ ಬಾಗಿಲು ಜೋರಾಗಿ ಸದ್ದಾಗುವುದು.)

ರಾಮಕೃಷ್ಣ—(ಬಾಗಿಲ ಕಡೆ ನೋಡಿ) ಬಡಕೊಳ್ಳಲಿ, ಚಂಡಾಲ (ಎಂದು ಹೆಂಡತಿಗೆ) ಹೂಂ, ಹೊರಡು ಬೇಗ. ಒಳಕ್ಕೆ ಹೋಗಿ ಪಾನಕ ಮಾಡು. ಅಷ್ಟರಲ್ಲಿ ನಾನು ಈ ಕಿಟಕಿಯಿಂದ ನೋಡಿ ಮಾತಾಡುತೇನೆ. ನಿನ್ನ ಕೆಲಸ ಮುಗಿದ ಮೇಲೆ ಬಾಗಿಲು ತೆಗೆಯೋಣ. ಹೊರಡು ಬೇಗ.

(ಗೌರಿ ಒಳಕ್ಕೆ ಹೋಗುವಳು. ರಾಮಕೃಷ್ಣನು ಕಿಟಕಿಯ ಬಳಿಗೆ ಹೋಗಿ ಇಣಿಕಿನೋಡಲು ಈಶ್ವರಯ್ಯನು ಕೋಪದಿಂದ ಕೂಗಾಡುತ್ತಾ ರಾಮಕೃಷ್ಣನ ಕಿವಿಯನ್ನು ಹಿಡಿದು ಎಳೆಯುವನು.)

ರಾಮಕೃಷ್ಣ—ಗೌರಿ! ಗೌರಿ! ತೆಗಿ! ತೆಗಿ! ಬಾಗಿಲು ತೆಗಿ. ಈ ನಾಯಿಮುಂಡೇಗಂಡ ನನ್ನ ಕಿವಿ ಹಿಡಿದು ಎಳೀತಾ ಇದಾನೆ. ಬೇಗ, ಬೇಗ!

ಗೌರಿ—ಅಯ್ಯೋ ಏನಂದರೆ! (ಎಂದು ಬೇಗನೆ ಒಳಗಿನಿಂದ ಬಂದು ಗಂಡನ ಬಳಿಗೆ ಹೋಗಿ ಅಂಗರೇಕನ್ನು ಹಿಡಿದು ಒಳಕ್ಕೆ ಎಳೆಯುವಳು.)

ಈಶ್ವರಯ್ಯ—(ಹೊರಗಿನಿಂದ) ತೆಗೆಯಯ್ಯಾ ಬಾಗಿಲು, ಎಷ್ಟು ಹೊತ್ತು? ಅರಮನೆ ಖಾಸಾ ಅಮಾನರನ್ನ ಇಷ್ಟು ಹೊತ್ತು ಕಾಯಿಸಬಾರದು. (ಎಂದು ರಾಮಕೃಷ್ಣನ ಕಿವಿಯನ್ನು ಬಿಟ್ಟು ಹಿಂದಕ್ಕೆ ದೂಡುವನು. ರಾಮಕೃಷ್ಣನು ಬಾಗಿಲನ್ನು ತೆಗೆಯುವನು. ಕೈಯಲ್ಲಿ ಲೆಕ್ಕಾಚಾರದ ಕಡತವನ್ನು ಹಿಡಿದುಕೊಂಡು ಈಶ್ವರಯ್ಯನು ಒಳಕ್ಕೆ ನುಗ್ಗುವನು. ಗೌರಿಯು ಗಂಡನಿಗೆ ಸಮೀಪವಾಗಿ ಒಳಮನೆಯ ಕಡೆಗೆ ನಿಲ್ಲುವಳು.) ಏನಯ್ಯಾ! (ಎಂದು ಎದೆಯ ಮೇಲೆ ಕೈಯಿಟ್ಟುಕೊಂಡು ಗಟ್ಟಿಯಾಗಿ ಜಬರದಸ್ತಿನಿಂದ) ಮಹಾರಾಜಾಧಿರಾಜ....

ರಾಮಕೃಷ್ಣ—(ಬೆದರಿದವನಂತೆ ನಟಿಸುತ್ತಾ) ಯಾರು....!

ಈಶ್ವರಯ್ಯ—ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಸಾರ್ವಭೌಮರಾದ ಶ್ರೀ ಕೃಷ್ಣದೇವರಾಯರ ಬಳಿ ಅಮಾನಾ ಅಧಿಕಾರದಲ್ಲಿರುವ ನನ್ನನ್ನ, ಈ ಈಶ್ವರಯ್ಯನನ್ನ, ಎಷ್ಟು ಹೊತ್ತಯ್ಯಾ ಬಾಗಿಲಲ್ಲಿ ಕಾಯಿಸೋದು? ಬೆಳಿಗ್ಗೆ ನಡುಬೀದೀಲಾದ ಮಂಗಳಾರತಿ ಸಾಲದೋ? ಊಂ,

ಹೂಂ !....ಎಲ್ಲಿ ನಿನ್ನ ಲೆಕ್ಕಾಚಾರ? (ಎಂದು ಕಡತವನ್ನು ಉದ್ದವಾಗಿ ಬಿಚ್ಚುತ್ತಾ ಓದುವನು.)

ರಾಮಕೃಷ್ಣ—ಇದೇನಿದು ಹನುಮಂತನ ಬಾಲ? ನಾನು ಇಷ್ಟೆಲ್ಲಾ ಬಾಕಿ ಎಲ್ಲಿಂದ ಕೊಡಬೇಕು?

ಈಶ್ವರಯ್ಯ—(ಗಮನಿಸದೆ) ನಾಲ್ಕು ಜೊತೆ ಒಬ್ಬಟ್ಟಿಂಚಿನ ಕಲಾಬತ್ತಿನ ಧೋತ್ರಗಳು, ನಲವತ್ತು ವರಹಾ,—ಮೂರು ಜರತಾರಿ ರುಮಾಲುಗಳು, ಮೂವತ್ತು ವರಹಾ,—ಕಾಶಿ ಬುಟ್ಟಾ ಅಂಗವಸ್ತ್ರಗಳು ಆರು, ಅರುವತ್ತು ವರಹಾ,—ಕಾಶ್ಮೀರದ ಶಾಲುಗಳು ಎರಡು ಜೊತೆ, ನೂರಿಪ್ಪತ್ತು ವರಹಾ....

ಗೌರಿ—(ಗಂಡನನ್ನು ಕುರಿತು) ಇದೇನು ನಿಮ್ಮ ಡಬಡ್ತಾಳಿಕೆ ಅಂದರೆ? ಹೀಗೆಲ್ಲಾ ಬಟ್ಟೆ ತೆಗೆಯೋದಕ್ಕೆ ನೀವೇನು ದೊರೇಮಗನೇ? ಸಾಲ ಅಂದರೆ ನಾನೇನೋ ಮನೇ ಖರ್ಚಿನದು, ಕೊಂಚ ಅಂದುಕೊಂಡಿದ್ದೆ.

ರಾಮಕೃಷ್ಣ—(ಗಂಭೀರವಾಗಿ ತಲೆಯಲ್ಲಾಡಿಸುತ್ತಾ ಯೋಚನೆಯಲ್ಲಿರುವಂತೆ) ಡಬಡ್ತಾಳಿಕೆಯಲ್ಲ ಗೌರಿ, ಡಬಡ್ತಾಳಿಕೆಯಲ್ಲ; ವಿಧಿಯಿಲ್ಲದ ಖರ್ಚು. ದೊರೆಗಳ ಆಸ್ಥಾನಕ್ಕೆ ಹೋಗೋವಾಗ ತಿರುಕನಂತೆ ಹೋಗೋದಕ್ಕಾಗುತ್ತೆಯೆ? ಚೆನ್ನಾಗಿ ಬಟ್ಟೆ ಬರೆ ಹಾಕಿಕೊಂಡು ಹೋಗದಿದ್ದರೆ ಮಹಾರಾಜರಿಗೆ ಬಹಳ ಕೋಪ.

ಈಶ್ವರಯ್ಯ—ಕಿವಿಗೆ ಒಂದು ಜೊತೆ ವಜ್ರದ ಹತ್ತಕಡಕು, ನಾನೂರು ವರಹಾ....

ರಾಮಕೃಷ್ಣ—(ಗೌರಿ 'ಇದೇನಿದು' ಎಂದು ಕೇಳುವಂತೆ ನೋಡಲು, ತಾನು ಕಿವಿಯನ್ನು ಮುಟ್ಟಿ ನೋಡಿಕೊಳ್ಳುತ್ತಾ) ಅಯ್ಯೊ, ಅಡವಿಟ್ಟಿನಲ್ಲ ಅವತ್ತೇ ಅದನ್ನ !

ಗೌರಿ—(ರಾಮಕೃಷ್ಣನ ಕಡೆ ನೋಡುತ್ತಾ, ಈಶ್ವರಯ್ಯನಿಗೆ ಕೇಳಿಸುವಂತೆ) ಬಾಕಿಯೆಲ್ಲಾ ಒಟ್ಟು ಎಷ್ಟಾಗುತ್ತೊ ಕಾಣೆ ?

ಈಶ್ವರಯ್ಯ—ಸಾವಿರದ ಮುನ್ನೂರ ಎಂಭತ್ತೈದುವರೆ ವರಹಾ.

ಗೌರಿ—ಅಬ್ಬಬ್ಬಾ ! ಎಲ್ಲಿಂದ ತರಬೇಕು ಅಷ್ಟೊಂದನ್ನ ನಾವೀಗ ? ಸದ್ಯಕ್ಕೆ ಒಂದು ಬಿಡಿಗಾಸಾದರೂ ಇಲ್ಲವಲ್ಲಾ ಕೈಲಿ ?

ಈಶ್ವರಯ್ಯ—ನಿಮ್ಮ ಸ್ಥಿತಿ ನೋಡಿ ನನಗೂ ಕನಿಕರವಾಗುತ್ತಮ್ಮಾ. ಆದರೆ ನಾನೇನು ಮಾಡಲಿ ? ನನ್ನ ಅಮಾನಾ ಅಧಿಕಾರದಲ್ಲಿ ಕೆಲಸವೆಲ್ಲಾ ಖರಾರ್‌ವಾಕ್—ಒಂದೇ ಪೆಟ್ಟು, ಎರಡೇ ತುಂಡು. ಸಾಲಾನೂ ಬಿಡೋದಿಲ್ಲ, ಬಾಕಿ ಕೊಡೋವರೆಗೂ ಸಾಲಗಾರನನ್ನೂ ಬಿಡೋದಿಲ್ಲ. (ಎಂದು ರಾಮಕೃಷ್ಣನ ತೋಳನ್ನು ಒರಟುತನದಿಂದ ಹಿಡಿದು) ಆದ್ದರಿಂದ ನೋಡು ರಾಮಕೃಷ್ಣಯ್ಯ, ನೀನು ಸುಮ್ಮನೆ ಸಾಲ ತೀರಿಸುತೀಯೋ, ಇಲ್ಲ ಮುಂದಿನ ಕೆಲಸ ನಡೆಸಲೊ ?

ಗೌರಿ—(ರಾಮಕೃಷ್ಣನನ್ನು ಕುರಿತು) ಅಯ್ಯೋ ಇದೇನು ಅಂದರೆ, ಮನೆಗೆ ಬಂದ ದೊಡ್ಡಮನುಷ್ಯರನ್ನ ಕೂತುಕೊಳ್ಳಿ ಎಂತ ಹೇಳಬಾರದೆ ?—ಹೀಗೆ ಸುಮ್ಮನೆ ನಿಂತಿದೀರಿ ! ಪಾಪ, ಅವರು ಎಷ್ಟುಹೊತ್ತಿನಿಂದ ನಿಂತುಕೊಂಡೇ ಮಾತಾಡುತಾ ಇದಾರೆ. ಬಹಳ ಚೆನ್ನಾಯಿತು !

ರಾಮಕೃಷ್ಣ—(ಮಣೆಯ ಕಡೆ ಕೈತೋರಿಸಿ) ಬನ್ನಿ, ಈಶ್ವರಯ್ಯನವರೇ ಬನ್ನಿ, ಕೂತುಕೊಳ್ಳಿ ; ಕೂತುಕೊಂಡು ನಿಧಾನ

ವಾಗಿ ಮಾತಾಡೋಣ ಈ ವಿಚಾರಾನ; ಬನ್ನಿ ಕೂತು ಕೊಳ್ಳಿ. (ಎಂದು ಜರುಗಲು ಯತ್ನಿಸುವನು. ಆದರೆ ಈಶ್ವರಯ್ಯನು ಕದಲದೆ ಮತ್ತಿಷ್ಟು ಬಲವಾಗಿ ರಾಮಕೃಷ್ಣನನ್ನು ಹಿಡಿದುಕೊಳ್ಳುವನು. ಅವನು ನೋವಿನಿಂದ ಸೊಟ್ಟಮೋರೆ ಮಾಡುವನು.)

ಈಶ್ವರಯ್ಯ—ಅದೊಂದೂ ಆಗತಕ್ಕದ್ದಲ್ಲ.

ರಾಮಕೃಷ್ಣ—(ಅತಿವಿನಯವನ್ನು ತೋರಿಸುತ್ತಾ, ಸ್ತೋತ್ರಪಾಠಕನಂತೆ) ಬನ್ನಿ ರಾಯರೇ, ಬನ್ನಿ, ಕೂತುಕೊಳ್ಳಿ. ಯಾಕೆಂದರೆ, ನೋಡಿ, ಇಂಥಾ ವಿಷಯಗಳನ್ನ ನಿಂತುಕೊಂಡು ಮಾತಾಡಿ ದರೆ ಚೆನ್ನಾಗಿರೋದಿಲ್ಲ. ನಿಮಗೂ ಕೂಡ, ಆ ನಿಮ್ಮ ಕನಿಕರಾ ಅನ್ನೋ ಅಪಾರವಾದ ಕರುಣಾಸಮುದ್ರದಲ್ಲಿ ನಮ್ಮಂಥಾ ಬಡಪಾಯಿಗಳನ್ನ ಚೆನ್ನಾಗಿ ಮುಳುಗಿಸೋ ದಕ್ಕೂ ಆಗೋದಿಲ್ಲ. ಅದೂ ಅಲ್ಲದೆ ನೀವೂ ನಾವೂ ಇಬ್ಬರೂ ನಿಂತುಕೊಂಡೇ ಮಾತಾಡಿಬಿಟ್ಟದ್ದೇ ಆದರೆ, ತಮ್ಮ ಸಂದರ್ಶನದಿಂದ ನಮಗಾಗೋ ಅಂಥ—ನಮಗೆ ಮಾತ್ರ ಯಾಕೆ, ಈ ಪ್ರಪಂಚದ ಮಾನವಕೋಟಿಗೆಲ್ಲಾ ತಮ್ಮಂಥವರನ್ನು ಕಂಡರೆ ಆಗುವಂಥ—ಆ ಸಂತೋಷ ಅನ್ನೋದಿದೆ ನೋಡಿ, ಅದು ಆನಂದಬಾಷ್ಪರೂಪದಲ್ಲಿ ಧಾರಾ ಕಾರವಾಗಿ ಹರಿಯೋದಕ್ಕೂ ಅವಕಾಶವಾಗೋದಿಲ್ಲ!....

ಈಶ್ವರಯ್ಯ—ಓಹೋ, ನಿಧಾನ ವಿದೂಷಕರೇ, ನಿಧಾನ! ಈ ತಳುಕುಬಳುಕುಗಳೆಲ್ಲಾ ನನ್ನಲ್ಲಿ ನಡಿಯೋದಿಲ್ಲ!

ರಾಮಕೃಷ್ಣ—ಹಾಗೆಲ್ಲಾ ತಪ್ಪು ತಿಳಕೊಳ್ಳಕೂಡದು ರಾಯರೇ ತಾವು....

ಗೌರಿ—ಕೂತುಕೊಳ್ಳಬಾರದೆ ರಾಯರೇ? ಕೂತುಕೊಳ್ಳಿ. ಈ ಮಧ್ಯಾಹ್ನದ ಬಿಸಿಲಲ್ಲಿ ಪಾಪ, ಬಹಳ ದೂರ ನಡೆದು ಬಂದು ದಣಿದಿದೀರಿ. ಸ್ವಲ್ಪ ವಿಶ್ರಮಿಸಿಕೊಳ್ಳಿ. (ರಾಮಕೃಷ್ಣನ ಕಡೆ ನೋಡುತ್ತಾ) ಒಂದಿಷ್ಟು ಕಲ್ಲುಸಕ್ಕರೆ ಪಾನಕ ಮಾಡಿಕೊಡಲೆ? ದಾಹಶಮನವಾಗುತ್ತೆ. ಕೈಕಾಲು ತೊಳಕೊಳ್ಳೋದಕ್ಕೆ ನೀರು ತಂದುಕೊಡುತೇನೆ.

ಈಶ್ವರಯ್ಯ—(ಸಂತೋಷದಿಂದ ಹೊಟ್ಟೆಯನ್ನು ನೀವುತ್ತಾ) ಆಹಾಹಾ! ಇದೀಗ ಸರಿಯಾದ ಮಾತಮ್ಮಾ! ಏನು ಕೆಂಪುಕಲ್ಲು ಸಕ್ಕರೆ ಪಾನಕಾನೋ?

ಗೌರಿ—ಏನೋ ಬಡವರ ಮನೆ ಫಲಾರ, ದೇವರು ಕೊಟ್ಟದ್ದು. ಇಗೋ ಕಾಲಿಗೆ ನೀರು. (ಎಂದು ತಂಬಿಗೆಯನ್ನು ತಂದಿಡುವಳು. ಈಶ್ವರಯ್ಯನು ಅದನ್ನು ತೆಗೆದುಕೊಂಡು ಹೊರಗೆ ಹೋಗುವನು.)

ರಾಮಕೃಷ್ಣ—ನೋಡು, ಬಹಳ ಚಾಕಚಕ್ಯದಿಂದ ಇರಬೇಕು. ಒಂದಲ್ಲದಿದ್ದರೆ ನಾಲ್ಕು ಲೋಟ ಪಾನಕ ಸುರಿ ಆ ಬಕಾಸುರನ ಹೊಟ್ಟೆಗೆ, ಚಿಂತೆಯಿಲ್ಲ. ಚೆನ್ನಾಗಿ ಮತ್ತು ಬರೋ ಹಾಗಾಗಬೇಕು. (ಎಂದು ಹಲ್ಲುಕಡಿಯುವನು.)

ಈಶ್ವರಯ್ಯ—(ಒಳಗೆ ಬಂದು ತಂಬಿಗೆಯನ್ನು ಕೆಳಗಿಟ್ಟು) ಎಲ್ಲಮ್ಮಾ ಮತ್ತೆ. ನೋಡಿ, ಬಹಳ ಬೇಗ ತರಬೇಕು ಪಾನಕ. ನನಗೆ ಹೊತ್ತಾಯಿತು. (ಗೌರಿ ತಂಬಿಗೆಯನ್ನು ತೆಗೆದುಕೊಂಡು ಒಳಗೆ ಹೋಗುವಳು. ಈಶ್ವರಯ್ಯನು ಮಣೆಯ ಮೇಲೆ ದೋಸೆಯನ್ನು ನೋಡದೆ ತಟ್ಟನೆ ಕುಸಿದುಬಿದ್ದು ಕುಳಿತುಕೊಳ್ಳುವನು.)

ರಾಮಕೃಷ್ಣ—(ಬೇಗನೆ, ಗಾಬರಿಯಿಂದ) ಓಹೋ ಮೆಲ್ಲಗೆ, ಮೆಲ್ಲಗೆ, ದೋಸೆ, ದೋಸೆ!

ಈಶ್ವರಯ್ಯ—ಏನು! ಏನು! ಇದು? ಈ ಸೀಕಲುದೋಸೆ? ನನಗಲ್ಲ ತಾನೆ ಇದು? (ಎಂದು ಹಿಂದೆ ಬಟ್ಟೆಗೆ ಅಂಟಿಕೊಂಡಿರುವ ದೋಸೆಯನ್ನು ಕಿತ್ತು ತೆಗೆದು ಕೆಳಗೆ ಬಿಸಾಟು ಕುಳಿತುಕೊಳ್ಳುವನು.) ಹುಂ! ಎಲ್ಲಿ, ಇನ್ನು ಈ ಬಾಕಿ ವಿಚಾರ. (ರಾಮಕೃಷ್ಣನೂ ಮೆಲ್ಲಗೆ ಇನ್ನೊಂದು ಮಣೆಯ ಮೇಲೆ ಕುಳಿತುಕೊಳ್ಳುವನು. ಗೌರಿಯು ಪಾನಕ ತುಂಬಿದ ಒಂದು ತಂಬಿಗೆಯನ್ನೂ ಲೋಟವನ್ನೂ ತಂದು ಗಂಡನ ಮುಂದಿಟ್ಟು ಪಕ್ಕಕ್ಕೆ ನಿಲ್ಲುವಳು.)

ರಾಮಕೃಷ್ಣ—ನನಗೆ ಯಾಕೇ, ಅವರಿಗೆ, ಅವರಿಗೆ ಕೊಡು. (ಎಂದು ತಂಬಿಗೆಯಿಂದ ಪಾನಕವನ್ನು ಲೋಟಕ್ಕೆ ಬಗ್ಗಿಸಿ ಈಶ್ವರಯ್ಯನ ಮುಂದಿಡುವನು. ಅವನು ಅದನ್ನು ತೆಗೆದುಕೊಂಡು ಕುಡಿಯುತ್ತಿರುವನು. ರಾಮಕೃಷ್ಣನು ಬಾಯಿ ಚಪ್ಪರಿಸಿಕೊಂಡು ಈಶ್ವರಯ್ಯನನ್ನು ನೋಡುತ್ತಾ ಸೊಟ್ಟಮೋರೆ ಮಾಡುವನು.)

ಈಶ್ವರಯ್ಯ—ಬಹಳ ಚೆನ್ನಾಗಿದೆ ರಾಮಕೃಷ್ಣಯ್ಯ, ಪಾನಕ. (ಎಂದು ಕುಡಿಯುತ್ತಿರುವನು.)

ರಾಮಕೃಷ್ಣ—(ಮೆಲ್ಲಗೆ ಕೈಗಳನ್ನು ಸವರಿಕೊಳ್ಳುತ್ತಾ, ಬಹಳ ವಿನಯದಿಂದ ಹಲ್ಲು ಕಿರಿಯುತ್ತಾ) ರಾಯರೇ! ಈ ಸಾಲದ ವಿಷಯವಾಗಿ....ಏನಾದರೂ ಏರ್ಪಾಡು....ಅಂದರೆ....ಈಗ ಸದ್ಯಕ್ಕೆ ಹಣಕೊಡದೆ, ಪತ್ರಾನೋ ಗಿತ್ರಾನೋ ಬರಕೊಟ್ಟು.... ಅಥವಾ....

ಈಶ್ವರಯ್ಯ—ಅದಕ್ಕೇನು, ಆಗಬಹುದು. ನೀನು ಕಾಯಿಲೆ ಮಲಗಿದೀ ಅಂತಲೋ ಏನಾದರೂ ನೆವ ಹೇಳಿ, ಅಥವಾ.... ಊಹೂಂ—ಅದೆಲ್ಲಾ ಆಗೋದಿಲ್ಲ; ಬಹಳ ಕಷ್ಟವಾಗುತ್ತೆ. ನನ್ನ ಹೆಸರು ನಾನು ಉಳಿಸಿಕೋಬೇಕು. ದೊರೆಗಳ ಬಳಿ

ನೌಕರರು ನಾವು ತೃಪ್ತಿಕರವಾಗುವಂತೆ ಕೆಲಸಮಾಡ ಬೇಕು. (ಎಂದು ಪಾನಕವನ್ನು ಕುಡಿದು ಬರಿದಾದ ಲೋಟವನ್ನು ಕೆಳಗಿಡುವನು.)

ರಾಮಕೃಷ್ಣ—ತಗೊಳ್ಳಿ, ಇನ್ನೊಂದು ಲೋಟ ತಗೊಳ್ಳಿ! ಆ ತಂಬಿಗೇಲಿರೋ ಪಾನಕಾನೆಲ್ಲಾ ಬಗ್ಗಿಸಿಕೊಳ್ಳಿ, ಎಲ್ಲಾ ನಿಮಗೇ, ಬಗ್ಗಿಸಿಕೊಳ್ಳಿ. (ಎಂದು ತನ್ನಲ್ಲಿ ತಾನೇ ಹಲ್ಲುಕಡಿಯುತ್ತಾ ಪಾನಕವನ್ನು ತಂಬಿಗೆಯಿಂದ ಲೋಟಕ್ಕೆ ಬಗ್ಗಿಸುವನು.)

ಈಶ್ವರಯ್ಯ—(ಕುಡಿಯುತ್ತಾ, ಸ್ವಲ್ಪ ಮತ್ತಿನಿಂದ) ಭಲೇ ಸೊಗಸಾಗಿದೆ ಕಣಯ್ಯ ಪಾನಕ. ನಿನ್ನ ಹೆಂಡತಿ ತಿಂಡಿತೀರ್ಥಗಳ ವಿಷಯದಲ್ಲಿ ನುರಿತ ಕೈ. ನೋಡು, ಮುಂದೆ ಎಂದಾದರೂ ನಿನಗೆ ಕಷ್ಟಕಾಲ ಬಂದರೆ, ಏನೋ....'ಜಾತಸ್ಯ....' ಅಂತ ಏನೇನೋ ಹೇಳುತಾರಲ್ಲಾ ಹಾಗೆ,—ನೀನೂ ನೋಡು, ಎಷ್ಟಾದರೂ ಮನುಷ್ಯಮಾತ್ರದವನು—ಎಂದಿದ್ದರೂ ಒಂದು ದಿನ....ಆಗ ನೀನು ನಿನ್ನ ಹೆಂಡತಿಯ ಅನ್ನಬಟ್ಟೆಗೇನೂ ಯೋಚನೆ ಮಾಡಬೇಡ. ನಮ್ಮ ಮನೇಲೂ ಅಡಿಗೆಮಾಡೋರು ಯಾರೂ ಇಲ್ಲ....

ಗೌರಿ—(ಕೋಪದಿಂದ ಹಲ್ಲುಕಡಿದು) ಅಮಲು ಏರುತಾ ಇದೆ!

ರಾಮಕೃಷ್ಣ—ರಾಯರೇ! ತಾವೇನೋ ಒಂದು ಕರಾರಿನ ವಿಚಾರ ಅಪ್ಪಣೆ ಕೊಡಿಸೋಣವಾಯಿತಲ್ಲ ಆಗ.... ಸುಮಾರು.... ನಿಮ್ಮ ಮೋತೀಖಾನೆ ಮೋಃಖ್ತೇಸರರು ಇದಕ್ಕೇನು ಹೇಳುತಾರೆ? ಮಸಲಾ—ಇವತ್ತೋ, ನಾಳೇನೋ....ನಾನು ಒಂದಿಷ್ಟು ಅಷ್ಟು ಕೊಟ್ಟುಬಿಟ್ಟು....ಉಳಿದದ್ದನ್ನ, ಹಾಂ....

ಈಶ್ವರಯ್ಯ—ಹಾಗಾದರೆ ಈಗ ಎಷ್ಟು ಕೊಡುತೀ ಕೈಮೇಲೆ?

ರಾಮಕೃಷ್ಣ—ಈಗ, ಆಂ .... ಊಂ.... ನಾಳೆ .... ಬಹುಶ .... ಊಂ....

ಈಶ್ವರಯ್ಯ—(ಮತ್ತಿನಿಂದ ಸ್ವಲ್ಪ ತೊದಲುತ್ತಾ) ನೋಡಪ್ಪ, ನಿನಗೆ ಅನುಕೂಲ ಮಾಡಿಕೊಡಬೇಕು ಅಂದರೆ ನನಗೇನೋ ಸಮ್ಮತವೇನೇ; ಆದರೆ ನೋಡು, ನಾಳೆ ಅಂತ ಅಂದರೆ, ನಿನ್ನ ಮನಸ್ಸು ಎಷ್ಟು ಒಳ್ಳೆಯದಾದರೂ, ನಾಳೆ ಯಾರೋ, ನಾವು ಯಾರೋ....

ರಾಮಕೃಷ್ಣ—(ವಿನಯದಿಂದ ಹಲ್ಲು ಕಿರಿಯುತ್ತಾ) ಅಯ್ಯಯ್ಯೋ, ಋಂಟಿ ರಾಯರೇ! ಛೇ! ಛೇ!

ಈಶ್ವರಯ್ಯ—....ಇವತ್ತು ನಿನ್ನ ಬಿಟ್ಟುಬಿಟ್ಟರೆ ನಾಳೆ ನೀನು ಈ ಊರಲ್ಲೇ ಇರುತೀಯಾ ಅಂತ ಹೇಗೆ ನಂಬಿಕೆ ನನಗೆ?

ರಾಮಕೃಷ್ಣ—ಛೇ! ಛೇ! ಛೇ! ನನ್ನ ವಿಷಯದಲ್ಲಿ ಹಾಗೆಲ್ಲಾ ಹೇಳಬಹುದೇ ರಾಯರೇ ತಾವು! ಎಲ್ಲರೂ ಒಂದೇ, ನಾನೂ ಒಂದೇನೆ? (ಎಂದು ಹೆಂಡತಿಯನ್ನು ಕುರಿತು) ಎಲ್ಲಿ ಗೌರಿ, ರಾಯರಿಗೆ ತಾಂಬೂಲ ತಂದುಕೊಡು, ಬೇಗ. ಜಾಕಾಯಿ ಜಾಪತ್ರೆ ಹೆಚ್ಚಾಗಿ ಹಾಕಿಕೊಂಡು ಬಾ, ರಾಯರಿಗೆ ಇಷ್ಟ! (ಎಂದು ಸನ್ನೆಮಾಡುವನು. ಗೌರಿಯು ಹಾಗೆಯೇ ಮಾಡುವಳು.)

ಈಶ್ವರಯ್ಯ—(ತಾಂಬೂಲವನ್ನು ತೆಗೆದುಕೊಂಡು, ತೂಗಾಡುತ್ತಾ ಎದ್ದು) ಊಂ, ಹೋಗಲಿ ಬಿಡು, ನೀನೇನೋ ಇವತ್ತು ಬೆಳಿಗ್ಗೆ ಪೇಟೇಲಿ ಕಂಡುಬಂದದ್ದಕ್ಕಿಂತ ಸ್ವಲ್ಪ ಒಳ್ಳೆಯವನಾಗಿ ಕಾಣುತೀ. ಏನೋ ನಾನೂ ದಯಾದಾಕ್ಷಿಣ್ಯ ಇಟ್ಟು

ಬಿಟ್ಟುಬಿಡುತೇನೆ. ಇನ್ನು ನಾನು ಹೋಗುತೇನೆ. ನಿದ್ದೆ ಬರುತಾ ಇದೆ. (ಎಂದು ತಡವರಿಸಿ ನಡೆಯುತ್ತಾ ಒಳಮನೆಯ ಕಡೆಗೆ ನುಗ್ಗುವನು.)

ರಾಮಕೃಷ್ಣ—ರಾಯರೇ! ರಾಯರೇ! ಅದು ಅಡಿಗೆಮನೆ! ಹೀಗೆ, ಹೀಗೆ ಬರಬೇಕು. (ಎಂದು ಬಾಗಿಲಿಗೆ ಈಶ್ವರಯ್ಯನನ್ನು ಕರೆದುಕೊಂಡು ಬರುವನು.)

ಈಶ್ವರಯ್ಯ—ನೋಡು, ನಾನು ಮನೆಗೆ ಹೋಗಿ ನಿದ್ದೆಮಾಡಿ ಎದ್ದುಬರೋತನಕ ವಾಯಿದೆ ನಿನಗೆ, ಅಷ್ಟೆ. ಗೊತ್ತಾಯಿತೊ? ಹೂಂ. (ಎಂದು ಹೋಗುವನು. ರಾಮಕೃಷ್ಣನು ಬೇಗನೆ ಬಾಗಿಲು ಹಾಕಿಬಿಟ್ಟು ಕಿಟಕಿಯಲ್ಲಿ ನೋಡುವನು.)

ರಾಮಕೃಷ್ಣ—ಗೌರಿ, ಗೌರಿ, ಇಲ್ಲಿ ಬಾ, ಇಲ್ಲಿ ಬಾ, ಬೇಗ. ಅಲ್ಲಿ ನೋಡು ಆ ಶನಿ ಬೀದೀಲಿ ಒಂದು ವರ್ತಕರ ಗಾಡೀನ ಎಡವಿಬಿಟ್ಟು ಮುಗ್ಗರಿಸಿ ಬಿದ್ದುಕೊಂಡ ಆ ಗಾಡೀ ಕೆಳಗೆ. (ಗೌರಿಯು ಹೋಗಿ ನೋಡಿದಮೇಲೆ ಇಬ್ಬರೂ ಕಿಟಕಿಯನ್ನು ಬಿಟ್ಟು ಬರುವರು.)

ಗೌರಿ—ನನ್ನ ಒಡವೆ ಮಾರಹೇಳಿದ್ದಕ್ಕೆ ತಕ್ಕ ಶಾಸ್ತಿಯಾಯಿತು ಅವನಿಗೆ.

ರಾಮಕೃಷ್ಣ—ಶಾಸ್ತೀನೆ, ಶಾಸ್ತೀನೆ; ಇನ್ನೂ ಕೇಳುತೀಯಾ? ಬೀದಿ ಜನರೆಲ್ಲಾ ನೋಡಿ ಎಲ್ಲೋ ಹೆಂಡ ಕುಡಿದು ಬಂದು ಬಿದ್ದುಕೊಂಡಿದಾನೆ ಅಂತ ನಗುತಾರೆ. ಈ ಸಮಾಚಾರ ಅರಮನೇವರೆಗೂ ಹೋದರೆ ಆಗ ಇವನ ಅಧಿಕಾರಕ್ಕೆ ಸೊನ್ನೆ ಬೀಳುತ್ತೆ. ಆಗ ನನ್ನ ಅವಮಾನಕ್ಕೆ ತಕ್ಕ ಪ್ರತೀಕಾರ ಪೂರ್ತಿಯಾಗುತ್ತೆ.

ಗೌರಿ—ಉಸ್ಸಪ್ಪಾ! ಇದೊಂದು ಗಂಡಾಂತರ ಕಳೆದಂತಾಯಿತು.

(ಎಂದು ಮಣೆಯ ಮೇಲೆ ಬಂದು ಕುಳಿತುಕೊಳ್ಳುವಳು.)

ರಾಮಕೃಷ್ಣ—(ತಾನೂ ಅವಳ ಪಕ್ಕದಲ್ಲಿ ಮಣೆಯ ಮೇಲೆ ಕುಳಿತು) ನಿಜವಾಗಿಯೂ ಗೌರಿ, ನೀನು ಸರಸ್ವತೀನೇ ಸರಿ. ಏನು ಉಪಾಯ, ಏನು ಜಾಣತನ! ನನ್ನ ಚಿನ್ನ, ನನ್ನ ರನ್ನ! ಹೂಂ, ಎಲ್ಲಿ ಮತ್ತೆ, ನನಗೇನಾದರೂ ಪಾನಕ ಫಲಾರ ಇದೆಯೇನೋ ನೋಡು, ಬಹಳ ಹಸಿವಾಗುತಾ ಇದೆ.

ಗೌರಿ—ಈಗೆಲ್ಲಿಂದ ತರಲಿ ಪಾನಕ ನಾನು? ಕೊಟ್ಟಾಗ ಬೇಡ ಅಂತ ಜಂಬ ಮಾಡಿದಿರಿ. ಈಗ ತಾನೇ ಯಾರು ಬೇಡ ಅಂದರು, ಸಂಪಾದಿಸಿಕೊಂಡು ಬನ್ನಿ ಏನಾದರೂ; ಬೇಕು ಬೇಕಾದ ಹಾಗೆ ತಿಂಡಿ ಮಾಡಿಡುತೇನೆ.

ರಾಮಕೃಷ್ಣ—ನೀನು ಸುಮ್ಮನೆ ನನ್ನ ಹಿಂಸಿಸಬೇಡ. (ಎಂದು, ಆಮೇಲೆ ವ್ಯಂಗ್ಯವಾಗಿ) ಅಲ್ಲ,—ಆ ಉಗ್ರಾಣದ ಮಡಕೇಲಿರೋ ಹಣ ನಾನೇನು ನೋಡಲಿಲ್ಲ ಅಂದುಕೊಂಡೆಯೋ ನೀನು? ಅದರಲ್ಲಿ ಒಂದೆರಡು ವರಹಾ ಕೊಡು ಸಾಕು, ಸಕಲ ಸಾಮಗ್ರಿಗಳನ್ನೂ ತಂದುಹಾಕಿಬಿಡುತೇನೆ.

ಗೌರಿ—ಊಂ, ವಾಸಿಯಾಯ್ತು! ಅದನ್ನೂ ಆಗಲೇ ನೋಡಿಬಿಟ್ಟಿದೀರಲ್ಲಾ? ಒಂದು ವೇಳೆ ಹಣ ಇದ್ದರೆ ತಾನೆ ಏನು, ಅದು ನನ್ನ ಸ್ವಂತ ಹಣ, ಮನೇ ಖರ್ಚಿಗೆ ಕೊಡೋದಲ್ಲ.

ರಾಮಕೃಷ್ಣ—ಹೌದು, ಹೌದು, ಹಣವೇನೋ ನಿನ್ನದೇನೇ; ಆದರೆ ನೀನು ಯಾರು? ನನ್ನ ಹೆಂಡತಿ....

ಗೌರಿ—ಹೆಂಡತಿಯೋ ಗಂಡನೋ, ನನಗದೊಂದೂ ಗೊತ್ತಿಲ್ಲ. ಬೇಕಾದರೆ ನೀವೇ ಹೋಗಿ ಸಂಪಾದಿಸಿಕೊಂಡು ಬನ್ನಿ ಎಲ್ಲಾದರೂ. ನೀವೇನು ಗಂಡಸಲ್ಲವೆ?

ರಾಮಕೃಷ್ಣ—(ಅಳುಮೋರೆಯಿಂದ) ಹಾಗಾದರೆ ನಾನೇನು ಮಾಡ ಬೇಕೀಗ? ಸಂಪಾದಿಸು, ಸಂಪಾದಿಸು ಅಂತ ನೀನಂತೀಯೆ. ಆ ಪಿಶಾಚಿ ಆವಿಮಾನ ತಿರುಗಿ ಬಂದು ನನ್ನ ಹಿಡುಕೊಂಡು ಹೋಗಲಿ. ಅಯ್ಯೋ ದೇವರೆ, ಒಳ್ಳೇ ಗತಿ ಬಂತಲ್ಲಪ್ಪಾ ನನಗೆ. ಸತ್ತಾದರೂ ಸಾಯಬಾರದೆ ನಾನು? ನಿಶ್ಚಿಂತೆಯಾಗುತ್ತೆ!

ಗೌರಿ—ಜೋಗಿ ಮಹಾರಾಜರ ಹತ್ತಿರ ಏನಾದರೂ ಸಂಪಾದಿಸಿಕೊಂಡು ಬನ್ನಿ; ನಿಮ್ಮ ಮೇಲಿನ ಕೋಪಾನ ಇಷ್ಟು ಹೊತ್ತಿಗೆ ಅವರು ಮರೆತಿರಬಹುದು.

ರಾಮಕೃಷ್ಣ—ಅದೆಲ್ಲಾ ಆಗೋ ಮಾತಲ್ಲ. ಮಹಾರಾಜರ ಹತ್ತಿರಕ್ಕೆ ಸುಮ್ಮನೆ ಹೋಗೋದಕ್ಕಾಗುತ್ತೆಯೆ? ಹೊಸದಾಗಿ ಒಂದು ಹಾಸ್ಯಾನೋ ಪದ್ಯಾನೋ ಕಟ್ಟಿಕೊಂಡು ಹೋಗಬೇಕು. ಅದು ಈಗ ನನ್ನಿಂದಾಗೋ ಕೆಲಸವಲ್ಲ. ಹಾಸ್ಯ, ಕವನ ಅನ್ನೋದೇನು ಬಿಟ್ಟಿ ಬರುತ್ತೆ ಅಂದುಕೊಂಡೆಯಾ ಗೌರಿ? ಚೆನ್ನಾಗಿ ಮೃಷ್ಟಾನ್ನಭೋಜನ, ಆ, ಹೆಂಡತಿಯೊಡನೆ ಸರಸಸಲ್ಲಾಪ ಇವೆಲ್ಲಾ ಇದ್ದದ್ದೇ ಆದರೆ, ಆ ಹಾಸ್ಯ, ಆ ಕವಿತ್ವ ಅನ್ನೋದು ಊಟೇಲಿ ನೀರೂರಿದ ಹಾಗೆ ಊರುತಾ ಇರುತ್ತೆ! ಹಾಗಲ್ಲದೆ ಈಗಿನಂತೆ ನನ್ನ ಹೊಟ್ಟೇಲಿ ತಾಳ ಹಾಕುತಾ ಇರಲಿ, ಹೆಂಡತಿಯಾದವಳು ನೀನು ವಿರಸಪ್ರಲಾಪ ಪಟಾಟೋಪಗಳು ಮಾಡುತಾ ಇರು,—ಆ ನನ್ನ ಬುದ್ಧಿಶಕ್ತಿಗೆ ಮನುಷ್ಯನಂತೇನೇ ಹಸಿವೂ ಗಿಸಿವೂ, ಹೆದರಿಕೆ ಗಿದರಿಕೆ ಇಲ್ಲೇ ಇಲ್ಲವೆ? ಈಗ ಸದ್ಯಕ್ಕೆ ನನ್ನಲ್ಲಿ ಆ ಹಾಸ್ಯದ, ಆ ಕವನದ ಬುಗ್ಗೆಗಳು ಈ ನಿನ್ನ

ಕೋಪವೆಂಬ ಬಿಸಿಲಿನ ತಾಪಕ್ಕೆ ಒಣಗಿ ಹೋಗಿಬಿಟ್ಟವೆ, ಪ್ರಿಯೇ! ನಾನೀಗ ವಿದೂಷಕ ಕವಿಚಕ್ರವರ್ತಿ ತೆನ್ನಾಲ ರಾಮಕೃಷ್ಣನಲ್ಲ; ಹಸಿದು ಹೊಟ್ಟೆಗಿಲ್ಲದೆ ತಾಪತ್ರಯ ಪಡುತಾ ಇರೋ ಬಡ ಬ್ರಾಹ್ಮಣ!

ಗೌರಿ—ಆಹಾಹಾ! ಏನು ಚಮತ್ಕಾರವಪ್ಪಾ! ಈಗಾಗಲೇ ನನ್ನ ಜೊತೆಯಲ್ಲಿ ಕವಿತ್ವದಲ್ಲಿಯೇ ಮಾತಾಡುತಾ ಇದೀರಿ, ಇನ್ನು ಬೇರೆ ಕವಿತ್ವ ಬೇಕೆ? ಅದು ಹೇಗೊ! ಹಾಸ್ಯ ಕವಿತ್ವ ಮಾಡಿ ಸಂಪಾದಿಸೋದಕ್ಕೆ ಆಗದಿದ್ದರೆ ಬೀದೀಲಿ ಉಪಾದಾನಕ್ಕೆ ಹೋಗಿ. ಬಡ ಬ್ರಾಹ್ಮಣ ಅಂತ ಎಲ್ಲರೂ ಒಂದೊಂದು ಹಿಡಿ ಅಕ್ಕೀನಾದರೂ ನೀಡುತಾರೆ.

ರಾಮಕೃಷ್ಣ—ನನ್ನಿಂದಾಗೋ ಕೆಲಸವಲ್ಲ ಅದೆಲ್ಲಾ. ಹೀಗೆಲ್ಲಾ ಬದುಕಿ ಬಾಳಿದವನು ಭಿಕ್ಷೆ ಬೇಡೋದು ಅಂದರೇನು? ನನಗೆ ಅವಮಾನ.

ಗೌರಿ—ಹಾಗಾದರೆ ನಿಮ್ಮಿಷ್ಟದಂತೆ ಮಾಡಿ, ನನಗೇನು? ಅದೇನೇನೋ—'ಚತುರ್ವಿಧಕವಿತಾವಿಶಾರದ', 'ಆಶು ಕವಿತ್ವನಿಪುಣ', 'ಸರಸಕವಿಶ್ರೇಷ್ಠ', 'ಕುಮಾರಭಾ ರತಿ', ಅಂತ ಮಾರುಮಾರುದ್ದ ಬಿರುದುಗಳನ್ನೆಲ್ಲಾ ತಗಲು ಹಾಕಿಕೊಂಡಿದೀರಂತಲ್ಲಾ; ಆದರೂ ಇಷ್ಟೇನೇ ನಿಮ್ಮ ಬುದ್ಧಿಯ ಚುರುಕು, ಹಣ ಸಂಪಾದಿಸೋ ದಾರಿ ಗೊತ್ತಿಲ್ಲದ ಮೇಲೆ? (ಎಂದು ಹಂಗಿಸುವಳು.)

ರಾಮಕೃಷ್ಣ—ಹೊಟ್ಟೇಲಿ ತಂಪಾಗಿದ್ದರಲ್ಲವೇನೆ ಬುದ್ಧಿ ಚುರುಕಾಗಿರೋದು? 'ತಲೆ ಹೊಟ್ಟೆ ತಕ್ಕಡಿ ನ್ಯಾಯ' ಅಂತ ಒಂದು ಹೊಸ ನ್ಯಾಯ ಕಂಡು ಹಿಡಿದಿದೇನೆ ನಾನು,

ಗೊತ್ತಿಲ್ಲವೆ? ಹೊಟ್ಟೆ ತುಂಪಾಗಿದ್ದರೆ ಬುದ್ಧಿ ಚುರುಕಾಗಿರುತ್ತೆ; ಹೊಟ್ಟೆ ಚುರುಕಾಗಿದ್ದರೆ ಬುದ್ಧಿ ಮಂಕಾಗಿರುತ್ತೆ! ಹೂ (ಇಲ್ಲಿ ನೋಡು ಗೌರಿ. ನೀನು ಸುಮ್ಮನೆ ಮಾತಿಗೆ ಮಾತು ಬೆಳಸಿ ನನಗೆ ಇರೋ ಹಸಿವಿನ ಸಂಕಟವಲ್ಲ ಇನ್ನು ಕೋಪ ಬೇರೆ ಬರೋ ಹಾಗೆ ಮಾಡಬೇಡ. ಈಗ ನನ್ನ ಬುದ್ಧಿಗೆ ಏನೂ ಹೊಳೆಯೋದಿಲ್ಲ. ನೋಡೋಣ, ನೀನೇನೋ ಮಹಾ 'ನಾನೇ ಸರಸ್ವತಿಯ ಮುರುಕು, ನನ್ನಂಥಾ ಹೆಂಡತಿ ಸಿಕ್ಕಬೇಕಾದರೆ ನೀವು ಪುಣ್ಯ ಮಾಡಿರಬೇಕು, ನಾನೇ ಗಂಡಸಾಗಿದ್ದರೆ ನಿಮ್ಮಂಥಾವರೆಲ್ಲರನ್ನೂ ಮಾರಿಸುತಾ ಇದ್ದೆ' ಅಂತ ಎಷ್ಟೋ ಸಲ ಜಂಭ ಹೊಡಕೊಂಡಿದೀಯಲ್ಲಾ. ಎಲ್ಲಿ, ಈಗ ಹಣ ಸಂಪಾದಿಸೋದಕ್ಕೆ ಒಂದು ಮಾರ್ಗ ಹುಡುಕಿ ಹೇಳು ನೋಡೋಣ. ಆಗ ಗೊತ್ತಾಗುತ್ತೆ ನಿನ್ನ ಬುದ್ಧಿ ಕುಶಲತೆ.

ಗೌರಿ—ಓಹೋ ನನ್ನ ಕೈಲೇನೂ ಆಗೋದಿಲ್ಲ ಅಂದುಕೊಂಡಿದೀರೋ? ನೋಡಿ ಹಾಗಾದರೆ.

ರಾಮಕೃಷ್ಣ—ಅದೇನೋ; ಅದು ಹಾಗಿರಲಿ. ಎಲ್ಲಿ ಮತ್ತೆ, ಈಗಲಾದರೂ ಒಂದಿಷ್ಟು ಹೊಟ್ಟೆತುಂಬ ಅನ್ನ ಹಾಕಲಾರೆಯಾ ಗೌರಿ ನೀನು? [ಸರಸ್ವತಿಯಲ್ಲದೆ ಲಕ್ಷ್ಮಿ ಕೂಡ ಆಗಿದೀಯ—ಉಗ್ರಾಣದ ಮಡಕೇಲಿ ಹಣ ಇರೋ ತನಕ (ಎಂದು **ಪಕ್ಕಕ್ಕೆ ತಿರುಗಿ ಹೇಳಿ**)—ನೋಡು, ದೀನನ ಮೇಲೆ ಸ್ವಲ್ಪ ಕೃಪೆದೋರಿ ಅನ್ನಪೂರ್ಣೆಯೂ ಆಗಿಬಿಡು! ಅಲ್ಲಿಗೆ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳೂ ಕೂಡ ನಿನ್ನ



ಗೌರಿ—ಸಾಯೋದು ! ಭಲೇ ! ಎಂಥಾ ಒಳ್ಳೇ ಯೋಚನೆ ಅಂದರೆ !

ಪಾದಗಳಡಿಯಲ್ಲಿಯೇ ಬಿದ್ದು ಒದ್ದಾಡುವರೆಂದ ಮೇಲೆ ನನ್ನಂಥ ಪಾಮರನ ಪಾಡೇನು ಪ್ರಿಯೇ!

ಗೌರಿ—ಆಹಾಹಾ! ಈ ತಳುಕುಗಳೆಲ್ಲಾ ನನ್ನಲ್ಲಿ ನಡಿಯೋ ಹಾಗಿಲ್ಲ ಅಂದರೆ! ಎಷ್ಟುಸಲ ಅಂದರೆ ನಿಮಗೆ ಹೇಳೋದು? ಆ ಹಣ ನನ್ನ ಸ್ವಂತಕ್ಕೆ ಸೇರಿದ್ದು; ಮನೇ ಖರ್ಚಿಗೆ ಕೊಡೋ ದಲ್ಲ. ನನಗೆ ನನ್ನ ಸ್ವಂತ ಲೆಕ್ಕಾಚಾರಗಳೇ ಎಷ್ಟೋ ಇವೆ.—ನೆರೆಮನೆ ಸಾಕಮ್ಮನವರಿಗೆ ಐದು ವರಹಾ ಸಾಲ ಕೊಡಬೇಕು, ಮೂರನೆ ಮನೆ ಪಾತಮ್ಮನಿಗೆ ಎರಡು ವರಹಾ ಕೊಡಬೇಕು, ನನಗೊಂದು ಹೊಸ ಮೂಗುತಿ ತೆಗೆದುಕೋ ಬೇಕು, ಕೈಗೆ ಒಂದು ಗೆರೆ ಬಳೆ....ಹೀಗೇ ಇನ್ನೂ ಏನೇನೋ ಇದೆ. 'ಗಂಡಸಿಗ್ಯಾಕೆ ಗೌರೀ ದುಃಖ' ಅನ್ನೋ ಹಾಗೆ ಹೆಂಗಸರ ಲೆಕ್ಕಾಚಾರವೆಲ್ಲಾ ನಿಮಗ್ಯಾಕೆ?

ರಾಮಕೃಷ್ಣ—(ಅಳುವೋರೆಯಿಂದ) ಹಾಗಾದರೆ ಬಿಡು. ಈ ಹಸಿವು ತಾಪತ್ರಯಗಳಿಂದ ನರಳಿ ನರಳಿ ನಾನು ಸತ್ತುಹೋಗಿಬಿಡು ತೇನೆ. ಆಗ ನನ್ನ ಅಪರ ಕರ್ಮಕ್ಕಾದರೂ ದುಡ್ಡು ಖರ್ಚು ಮಾಡಬೇಕೋ ಇಲ್ಲವೋ ನೀನು?

ಗೌರಿ—(ಸ್ವಲ್ಪ ಯೋಚಿಸಿ)ಸಾಯೋದು! ಭಲೆ! ಎಂಥಾ ಒಳ್ಳೇ ಯೋಚನೆ ಅಂದರೆ! (ಎಂದು ಇದ್ದಕ್ಕಿದ್ದಂತೆ ಮನಸ್ಸಿಗೆ ಏನೋ ಹೊಳೆದ ಹಾಗೆ ಯೋಚಿಸುತ್ತಾ ಎದ್ದು ಸಂತೋಷದಿಂದ ಮಾತಾಡುವಳು.)

ರಾಮಕೃಷ್ಣ—(ಗಾಬರಿಯಿಂದಲೂ, ಆಶ್ಚರ್ಯದಿಂದಲೂ) ಒಳ್ಳೇ ಯೋಚನೆ! (ಎಂದು ಬಾಯಿಬಿಟ್ಟುಕೊಂಡು ಹೆಂಡತಿಯ ಕಡೆ ನೋಡುತ್ತಾ ಏಳುವನು)

ಗೌರಿ—ಹೌದು, ಗೊತ್ತಾಯಿತು! ಮಹಾರಾಣಿ ಚಿನ್ನಾದೇವಿಯ ವರು—ಗೊತ್ತಾಯಿತು!

ರಾಮಕೃಷ್ಣ—ಏನು, ಏನು? ಏನು ಹಾಗಂದರೆ!

ಗೌರಿ—ಅಂಥಾ ಕಷ್ಟಕಾಲದಲ್ಲಿ ಮಹಾರಾಣಿ ಚಿನ್ನಾದೇವಿಯವರು ಎಂದಿಗೂ ಕೈಬಿಡೋದಿಲ್ಲ. ಗಂಡ ಸತ್ತ ಹೆಂಗಸು, ದುಃಖವೆಲ್ಲಾ ಕರಗಿಬಿಟ್ಟು ಕಣ್ಣುತುಂಬಾ ನೀರು ಧಾರಾಕಾರವಾಗಿ ಹರಿಸುತಾ ಅಳುತಾ ಹೋದರೆ!....ಓ, ಏನು ಅಂದರೆ, ಬಹಳ ಒಳ್ಳೇ ಯೋಚನೆ ಅಂದರೆ!

ರಾಮಕೃಷ್ಣ—ಆದರೆ ನಾನಿನ್ನೂ ಸತ್ತಿಲ್ಲವಲ್ಲೇ! ಈಗಾಗಲೇ ಸಾಯಬೇಕು ಅಂತೀಯಾ ನನ್ನ! ನೋಡು ಗೌರಿ, ನೀನು ನನಗೊಂದಿಷ್ಟು ಹೊಟ್ಟೆತುಂಬ ಅನ್ನ, ಕೈತುಂಬ ಚಿನ್ನ ಕೊಟ್ಟದ್ದೇ ಆದರೆ ನಾನು ಯಾಕೆ ಸಾಯಬೇಕು ಹೇಳು?

ಗೌರಿ—(ತನ್ನ ಹಿಂದಿನ ಉತ್ಸಾಹದಿಂದಲೇ) ಇಲ್ಲಿ ಕೇಳಿ ಅಂದರೆ! ನೀವು ಸಾಯಿರಿ, ನಾನು ಹೋಗಿ ನಿಮ್ಮ ಉತ್ತರಕ್ರಿಯೆಗಳಿಗೆ ಅಂತ ದುಡ್ಡು ಸಂಪಾದಿಸಿಕೊಂಡು ಬರುತೇನೆ!

ರಾಮಕೃಷ್ಣ—ನಾನಿನ್ನೂ ಸಾಯಲಿಲ್ಲಾ ಅಂತ ಬಡುಕೊಳ್ಳುತಾ ಇದೇನೆ, ನೀನು ಸುಮ್ಮನೆ ಮಾತಾಡುತೀಯಲ್ಲಾ! ನಿಜವಾಗಿಯೂ ಗೌರಿ, ನಿನ್ನಂಥಾ ಹೆಂಡತೀನ ಬಿಟ್ಟುಬಿಟ್ಟು ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಸಾಯಬೇಕು ಅಂದರೆ.... ಉ ಹುಂ!....ಸುತರಾಂ ಇಷ್ಟವಿಲ್ಲ ನನಗೆ!

ಗೌರಿ—(ನಗುತ್ತಾ) ಅಯ್ಯೋ ಮಂಕೇ! ನೀವು ನಿಜವಾಗಿಯೂ ಸಾಯಬೇಕಾಗಿಲ್ಲ ಅಂದರೆ! ನೀವು ಸತ್ತುಹೋಗಿದೀರಿ ಅಂತ ನಾನು ಹೇಳುತೇನೆ ಅಷ್ಟೆ, ಸುಮ್ಮಸುಮ್ಮನೆ!

ರಾಮಕೃಷ್ಣ—(ಅರ್ಧ ನಗುವಿನಿಂದಲೂ, ಅರ್ಧ ಆಶ್ಚರ್ಯದಿಂದಲೂ) ಹಾಗಾದರೆ ಸತ್ತರೂ ನಾನು ಬದುಕಿಯೇ ಇರುತೇನೆ!

ಗೌರಿ—ಓಹೋ! ಈಗ ತಾನೇ ನೀವು ಪಂಥ ಕಟ್ಟಿದಿರಲ್ಲ ನನ್ನ ಸಂಗಡ, ಹಣ ಸಂಪಾದಿಸೋದಕ್ಕೆ ಒಂದು ಒಳ್ಳೇ ಉಪಾಯ ಹುಡುಕು, ನೋಡೋಣ ನಿನ್ನ ಬುದ್ಧಿಕುಶಲತೇನ ಅಂತ?

ರಾಮಕೃಷ್ಣ—(ಸಂದರ್ಭವನ್ನೆಲ್ಲಾ ಗ್ರಹಿಸಿ) ಓಹೋಹೋ! ಈಗ ಅರ್ಥವಾಯಿತು ನನಗೆ! ಮುಂಕುಬೂದಿ ಎರಚೋ ಆಟ! ಭೇಷ್, ಭೇಷ್! ಸೊಗಸಾದ ಯೋಚನೆ, ಚಿನ್ನದಂಥಾ ಯೋಚನೆ! (ಎಂದು ಸ್ವಲ್ಪ ಯೋಚಿಸಿ, ಆ ಮೇಲೆ ಉಪಾಯವಾಗಿ) ಆದರೆ, ಗೌರಿ, ನಾನು ಸಾಯೋದಕ್ಕಿಂತ....ನೋಡು, ಎಷ್ಟಾದರೂ ಮುತ್ತೈದೆ ಸಾವು!....

ಗೌರಿ—ಊಂ! ನಾನು ಸಾಯೋದಿಲ್ಲ (ಎಂದು ಮುಖವನ್ನು ಸೊಟ್ಟಮಾಡುವಳು.)

ರಾಮಕೃಷ್ಣ—ಹಾಗಾದರೆ ನಾನೂ ಸಾಯೋದಿಲ್ಲ. (ಎಂದು ತಾನೂ ಇನ್ನೊಂದು ಕಡೆ ಮುಖವನ್ನು ಸೊಟ್ಟಗೆ ತಿರುಗಿಸಿಕೊಂಡು ಹೋಗುವನು.)

ಗೌರಿ—ಹೋಗಲಿ ಬಿಡಿ, ನೀವು ಬಹಳ ಒಳ್ಳೆಯವರು ಅಂದರೆ! ನಾನು ತಂದದ್ದರಲ್ಲಿ ಅರ್ಧ ಹಣ ನಿಮಗೇ ಕೊಡುತೇನೆ! (ಎಂದು ಉಪಾಯವಾಗಿ ಮಾತಾಡುತ್ತಾ ಗಂಡನ ಬಳಿಗೆ ಬರುವಳು.)

ರಾಮಕೃಷ್ಣ—ಉಹೂಂ! ಅದೆಲ್ಲಾ ಆಗೋದಿಲ್ಲ; ಎಲ್ಲಾ ಹಣಾನೂ ಕೊಟ್ಟರೇ. ಇಲ್ಲದಿದ್ದರೆ ನಾನೇ ಹೋಗಿ ಸಂಪಾದಿಸಿಕೊಂಡು ಬರುತೇನೆ. ಹಾಗೆಲ್ಲಾ ಅರ್ಧ ಹಣ ತಕ್ಕೊಂಡು ಸಾಯೋ ಅಭ್ಯಾಸವಿಲ್ಲ ನನಗೆ! (ಎಂದು ಹೆಂಡತಿಯಿಂದ ಸ್ವಲ್ಪ ದೂರ ಸರಿಯುವನು.)

ಗೌರಿ—ಸತ್ತ ಹೆಣ ಅಂತ ಕರೆಯಿಸಿಕೊಳ್ಳೋದು ನನಗೆ ಇಷ್ಟವಿಲ್ಲ ಅಂದರೆ!

ರಾಮಕೃಷ್ಣ—ನಮಗೂ ಇಷ್ಟವಿಲ್ಲ ಅಂದರೆ! (ಎಂದು ಅವಳ ಧ್ವನಿಯನ್ನೇ ಅನುಕರಿಸಿ ಮೂದಲಿಸುವನು. ಆ ಮೇಲೆ ಹತ್ತಿರ ಬಂದು) ಬಿಡು ಗೌರಿ, ಇಲ್ಲಿ ನೋಡು, ಒಬ್ಬರಿಗೂ ಅನ್ಯಾಯ ಬೇಡ—ಇಬ್ಬರೂ ಸಾಯೋಣ, ಇಲ್ಲದಿದ್ದರೆ ಒಬ್ಬರೂ ಬೇಡ.

ಗೌರಿ—(ಸ್ವಲ್ಪ ಯೋಚಿಸಿ) ಓಹೋ, ಸರಿ ಅಂದರೆ! ಹಾಗೆಯೇ ಆಗಲಿ. ನೀವೂ ಹಣ ಸಂಪಾದಿಸಿಕೊಂಡು ಬರಬಹುದು. ಇಬ್ಬರೂ ಸಾಯೋಣ, ಇಬ್ಬರೂ ದುಡ್ಡು ತರೋಣ, ಒಳ್ಳೇ ಉಪಾಯ ಅದು. ಆದರೆ, ನಾನು ಮೊದಲು ಹೋಗೋದು; ನಾನಲ್ಲವೇ ಈ ಉಪಾಯ ಮೊದಲು ಹುಡುಕಿದ್ದು?

ರಾಮಕೃಷ್ಣ—ಓಹೋ. ಆ ಮೇಲೆ ನಿನ್ನ ಹಿಂದೇನೆ ನಾನೂ ಹೊರಡುತೇನೆ.

ಗೌರಿ—ನಾನು ಮಹಾರಾಣಿಯವರ ಹತ್ತಿರ ಹೋಗಿ ಅತ್ತು ಗೋಳಾಡಿ ಹಣ ಸಂಪಾದಿಸಿಕೊಂಡು ಬರುತೇನೆ; ನೀವು ಮಹಾರಾಜರ ಹತ್ತಿರ ಹೋಗಿ. ಇಂಥಾ ಹೊಸ ಹಾಸ್ಯಾನ ಅರಮನೆಯವರೆಂದಿಗೂ ನೋಡಿರೋದಿಲ್ಲ; ನಿಮ್ಮಿಂದ ಲಾದರೂ ಆಗುತಿತ್ತೆ ಅಂದರೆ? ಹೂಂ, ಎಲ್ಲಿ, ಸಿದ್ಧವಾಗಿ ಮತ್ತೆ, ಸಾಯೋದಕ್ಕೆ!

ರಾಮಕೃಷ್ಣ—ಹೂಂ. ನಾನು....(ಎಂದು ಹೇಳಿ ಜಗುಲಿಯ ಮೇಲೆ ಸ್ಥಳ ಸರಿಮಾಡಿಕೊಂಡು ತಲೆಯ ಕೆಳಗೆ ಶಾಲು ರುಮಾಲನ್ನಿಟ್ಟು ಬಿಳಿಯ ಪಂಚೆಯನ್ನು ಹೊದ್ದುಕೊಂಡು ಮಲಗುತ್ತಾ)....ಸಾಯುತೇನೆ! (ಎಂದು ಮಲಗುವನು.)

ಗೌರಿ—ನಾನಿನ್ನು ಹೋಗಿ ಬರಲೆ? (ಎಂದು ಹೊರಡಲುದ್ಯುಕ್ತಳಾಗುವಳು.)

ರಾಮಕೃಷ್ಣ—(ಅರ್ಧ ಎದ್ದು) ಇದೇನಿದು, ಹೀಗೇನೇ ಹೋಗೋದು ಗಂಡ ಸತ್ತ ಹೆಂಗಸು? ಚೆನ್ನಾಗಿ ಕೂದಲು ಕೆದರಿಕೊಂಡು ಕುಂಕುಮ ಅಳಿಸಿಕೊಂಡು ಅಳುತಾ ಹೋಗಬೇಕು. (ಗೌರಿ ಕೂದಲು ಕೆದರಿಕೊಂಡು, ಕುಂಕುಮ ಅಳಿಸಿಕೊಳ್ಳುವಳು.) ಎಲ್ಲಿ, ಸ್ವಲ್ಪ ಅಳು ಮತ್ತೆ, ನೋಡೋಣ ಹೇಗೆ ಅಳುತೀಯೋ! (ಗೌರಿ ಅಳುವಂತೆ ನಟಿಸುವಳು.) ಊಹೂಂ! ಸಾಲದು! (ಎಂದು ತಲೆಯಲ್ಲಾಡಿಸುವನು. ಗೌರಿ ಹೆಚ್ಚಾಗಿ ಅಳುವಂತೆ ನಟಿಸುವಳು.) ಅಯ್ಯಯ್ಯೋ! ಅಳಬೇಡ ಕಾಣೆ! ನಾ ನೋಡಲಾರೆ! (ಗೌರಿ ನಾಚಿಕೆಯಿಂದ ನಗುವಳು.)

ಗೌರಿ—ಹೂಂ, ಇನ್ನು ನಾನು ಹೊರಡುತೇನೆ.

ರಾಮಕೃಷ್ಣ—ಆಗಲಿ. ಆದರೆ ಮರೆಯಬೇಡ, ಇನ್ನು ಒಂದೆರಡು ನಿಮಿಷದಲ್ಲಿಯೇ ನಾನು ಬದುಕಿಬಿಟ್ಟು ಮಹಾರಾಜರ ಹತ್ತಿರಕ್ಕೆ ಹೋಗುತೇನೆ! ನನ್ನಾಣೆ ಗೌರಿ! ಬಲು ಜಾಣೆ ಕಾಣೆ ನೀನು. ನನಗೆ ತಕ್ಕ ಹೆಂಡತಿಯೇ ಸರಿ! ನೀನು ನನ್ನ ಹೆಣಕ್ಕೆ ತರೋ ಹಣಕ್ಕಿಂತ, ನಾನು ನಿನ್ನ ಹೆಣಕ್ಕೆ ಹೆಚ್ಚಾಗಿ ಸಂಪಾದಿಸಿಕೊಂಡು ಬರುತೇನೆ!

ಗೌರಿ—ಹೌದು ಅಂದರೆ. ಬದುಕಲಿ, ಸಾಯಲಿ, ನಾನು ನಿಮಗಿಂತ ಹೆಚ್ಚು ಬೆಲೆ ಬಾಳುತೇನೆ ಅಂದರೆ! (ಎಂದು ಮುಗುಳ್ನಗೆಯಿಂದ ಹೇಳಿಕೊಂಡು ನೋಡುತ್ತಾ ಹೋಗುವಳು.)

ರಾಮಕೃಷ್ಣ—(ಗೌರಿಯನ್ನು ವಿನೋದಾಶ್ಚರ್ಯಗಳಿಂದ ನೋಡುತ್ತಾ) ಅಬ್ಬಾ....(ಎಂದು ಮಲಗುವನು.)

[ತೆರೆ ಬೀಳುವುದು.]

# ಎರಡನೆಯ ದೃಶ್ಯ

[ವಿಜಯನಗರದ ಅರಮನೆಯ ಅಂತಃಪುರ; ಮಹಾರಾಣಿ ಚಿನ್ನಾದೇವಿಯವರ ಮಹಲು ದಿವ್ಯವಾಗಿ ಅಲಂಕೃತವಾಗಿದೆ. ಮಧ್ಯದಲ್ಲಿ ಒಂದು ಮಂಚ, ಒರಗಿಕೊಳ್ಳುವ ದಿಂಬುಗಳು, ಪಕ್ಕದಲ್ಲಿ ಒಂದು ಚಿಕ್ಕ ಗುಂಡುಮೇಜು, ಅದರ ಮೇಲೆ ಒಂದು ಕನ್ನಡಿ, ಗಂಧದ ಮರದ ಬೀಸಣಿಗೆ ಮುಂತಾದ ಅಲಂಕಾರದ ಉಪಕರಣಗಳಿರುವುವು. ಮಹಾರಾಣಿಯು ಮಂಚದ ಮೇಲೆ ದಿಂಬನ್ನೊರಗಿ ಕುಳಿತು ಒಡವೆಗಳನ್ನು ಪರೀಕ್ಷಿಸುತ್ತಿರುವಳು. ಹತ್ತಿರದಲ್ಲಿ ದಾದಿ ಪುಟ್ಟಮ್ಮಣ್ಣಿಯು ನಿಂತಿರುವಳು. ದೂರದಲ್ಲಿ ಒಂದು ಕಡೆಗೆ ಸ್ವಲ್ಪ ಮರೆಯಾಗಿ ಗೋಲ್ಕೊಂಡದ ವ್ಯಾಪಾರಿಗಳು ನಿಂತಿರುವರು. ಅವರು ಮಾತನಾಡುವಾಗ ಮಹಾರಾಣಿಯ ಕಡೆ ನೋಡದೆ ದಾದಿಯ ಮೂಲಕ ಮಾತಾಡುವರು.]

ಚಿನ್ನಾದೇವಿ—(ವಜ್ರ ಕೆಂಪು ಪಚ್ಚೆಗಳನ್ನು ಕೆತ್ತಿದ ಕೈಬಳೆಗಳನ್ನು ಹಾಕಿಕೊಂಡು ನೋಡುತ್ತಾ) ಆಹಾ! ಇದು ಎಷ್ಟು ಚೆನ್ನಾಗಿ ಒಪ್ಪುತ್ತೆ ನನಗೆ. ಇಲ್ಲಿ ನೋಡೆ ಪುಟ್ಟಮ್ಮಣ್ಣಿ, ಈ ಹರಳುಗಳ ಬೆಳಕು ಎಷ್ಟು ಕಣ್ಣು ಕೋರಯಿಸುವ ಹಾಗಿದೆ!

೧ನೆಯ ವರ್ತಕ—ನನ್ನ ಒಡವೆಗಳು ಸನ್ನಿಧಾನಕ್ಕೆ ಬಹಳ ಚೆನ್ನಾಗಿ ಒಪ್ಪುತ್ತವೆ. ಪ್ರಪಂಚವಲ್ಲೆಲ್ಲಾ ಅತ್ಯುತ್ತಮವಾದ ರತ್ನಗಳು ಮಾತ್ರವೇ ಸನ್ನಿಧಾನದ ಸೌಂದರ್ಯಕ್ಕೆ ಸಾಟಿಯಾಗಿ ಒಪ್ಪಬೇಕಾದರೆ. ನಾನು ತಂದಿರೋ ಒಡವೆಗಳೆಲ್ಲಾ ಅಷ್ಟು ಶ್ರೇಷ್ಠವಾದವುಗಳೇ. ಬೇಕಾದರೆ ಪರೀಕ್ಷೆ ಮಾಡಿ ನೋಡಬಹುದು.

೨ನೆಯ ವರ್ತಕ—ಈ ನವರತ್ನಖಚಿತಹಾರವನ್ನು ಸನ್ನಿಧಾನ ಒಪ್ಪಿಸಿಕೊಳ್ಳಬೇಕು. ಇದನ್ನು ಧರಿಸಿ ನೋಡಿದರೆ ಎಷ್ಟು ಚೆನ್ನಾಗಿ ಸನ್ನಿಧಾನದ ಸೌಂದರ್ಯಕ್ಕೆ ಒರೆಕೊಡುತ್ತೋ

ಮಹಾರಾಣಿಯವರಿಗೆ ತಿಳಿಯುತ್ತೆ. (ಪುಟ್ಟಮ್ಮಣ್ಣಿಯು ವರ್ತಕನಿಂದ ಹಾರವನ್ನು ತೆಗೆದುಕೊಂಡುಬಂದು ಮಹಾರಾಣಿಯ ಕೊರಳಲ್ಲಿ ಹಾಕಿ, ಆಕೆಯ ಕೈಗೆ ಕನ್ನಡಿಯನ್ನು ಕೊಟ್ಟು, ತಾನೂ ಪಕ್ಕದಲ್ಲಿ ನಿಂತು ನೋಡುವಳು.)

ಪುಟ್ಟಮ್ಮಣ್ಣಿ—ತಾಯಿ, ಬಹಳ ಚೆನ್ನಾಗಿ ಒಪ್ಪುತ್ತೆ ಈ ಹಾರ ತಮಗೆ.

ಚಿನ್ನಾದೇವಿ—ಹೌದು, ಈ ಒಡವೆಗಳು ನನಗೆ ಬಹಳ ಚೆನ್ನಾಗಿ ಒಪ್ಪುತ್ತವೆ ಪುಟ್ಟು. (ಎಂದು ಕನ್ನಡಿಯಲ್ಲಿ ನೋಡಿಕೊಳ್ಳುತ್ತಾ ಹಾರವನ್ನು ಸರಿಮಾಡಿಕೊಳ್ಳುವಳು.)

೩ನೆಯ ವರ್ತಕ—ಮಹಾರಾಣಿಯವರು ಈ ವಜ್ರದ ವಂಕಿಯನ್ನೂ ನೀಲದ ನಾಗಮುರಿಯನ್ನೂ ಪರಾಂಬರಿಸಬೇಕು. ಗೋಲ್ಕೊಂಡದ ಗಣಿಗಳಲ್ಲೆಲ್ಲಾ ಹುಡುಕಿದರೂ ಇಂಥಾ ಅನರ್ಘ್ಯವಾದ ರತ್ನಗಳು ದೊರೆಯಲಾರವು. ಕರ್ಣಾಟಕ ಸಾಮ್ರಾಜ್ಯದ ಚಕ್ರವರ್ತಿನಿಯವರ ಸನ್ನಿಧಾನದಲ್ಲಿ ಮಾತ್ರವೇ ಇರಬೇಕಾದ್ದು ಈ ಒಡವೆಗಳು. (ದಾದಿಯು ಅವುಗಳನ್ನು ತಂದು ಮಹಾರಾಣಿಯ ಕೈಗೆ ತೊಡಿಸುವಳು.)

ಚಿನ್ನಾದೇವಿ—ಪುಟ್ಟೋ, ಇವಕ್ಕೆಲ್ಲಾ ಬೆಲೆ ಎಷ್ಟೆಷ್ಟಾಗುತ್ತೋ ಕೇಳಿಕೊಂಡು ಬಾ ಅವರನ್ನ.

ಪುಟ್ಟಮ್ಮಣ್ಣಿ—(ವರ್ತಕರ ಬಳಿಗೆ ಹೋಗಿ) ಮಹಾರಾಣಿಯವರು ನಿಮ್ಮ ಒಡವೆಗಳ ಬೆಲೆಯನ್ನು ಕೇಳುತಾರೆ.

೧ನೆಯ ವರ್ತಕ—ಕೈ ಬಳೆಗಳಿಗೆ ಸಾವಿರ ವರಹಾ. (ಪುಟ್ಟಮ್ಮಣ್ಣಿಯ ಕಿವಿಯಲ್ಲಿ ಮೆಲ್ಲಗೆ) ಅದನ್ನು ಅವರು ಕೊಂಡುಕೊಂಡರೆ ನಿನಗೆ ಐವತ್ತು ವರಹಾ!

೨ನೆಯ ವರ್ತಕ—ರತ್ನಹಾರಕ್ಕೆ ಸಾವಿರದ್ಯೆನೂರು ವರಹಾ. (ದಾದಿಯ ಕಿವಿಯಲ್ಲಿ) ನೋಡು, ಮಹಾರಾಣಿಯವರು ಅದನ್ನು ಕೊಂಡುಕೊಂಡರೆ ನಿನಗೆ ಎಪ್ಪತ್ತು ವರಹಾ !

೩ನೆಯ ವರ್ತಕ—ನನ್ನ ಒಡವೆಗಳಿಗೆ ಎರಡು ಸಾವಿರದ ಐನೂರು ವರಹಾ. (ದಾದಿಯ ಕಿವಿಯಲ್ಲಿ) ನೋಡು, ಅದನ್ನು ಅವರು ಕೊಂಡುಕೊಳ್ಳೋ ಹಾಗೆ ಮಾಡಿದರೆ ನಿನ್ನ ಕೈಗೆ ನೂರು ವರಹಾ ಬೀಳುತ್ತೆ !

ಪುಟ್ಟಮ್ಮಣ್ಣಿ—(ಮಹಾರಾಣಿಯ ಬಳಿಗೆ ಬಂದು) ತಾಯಿ, ಬೆಲೆ ವಿಚಾರಿಸಿಕೊಂಡು ಬಂದೆ. ಕೈ ಬಳೆಗೆ ಸಾವಿರದ ನೂರು ವರಹಾ, ರತ್ನಹಾರಕ್ಕೆ ಸಾವಿರದ ಆರುನೂರು ವರಹಾ, ವಂಕಿನಾಗಮುರಿಗಳಿಗೆ ಎರಡು ಸಾವಿರದ ಆರುನೂರು ವರಹಾ ಆಗುತ್ತಂತೆ. ತೆಗೆದುಕೊಂಡು ಬಿಡಿ ತಾಯಿ. ತಮ್ಮಂಥವರಲ್ಲದೆ ಇನ್ನು ಯಾರು ಧರಿಸಬೇಕು ಅಂಥಾ ಅಮೋಘವಾದ ಒಡವೆಗಳನ್ನ.

ಚಿನ್ನಾದೇವಿ—ಏನೇನು ? ಈ ವರ್ತಕರಿಗೇನಾದರೂ ಧನಪಿಶಾಚಿ ಹಿಡಿದಿದೆಯೋ ? ಇಂಥಾ ಕೆಲಸಕ್ಕೆ ಬಾರದ ಕಸಕ್ಕೆಲ್ಲಾ ಯಾರು ಕೊಡೋರು ಸಾವಿರಾರು ವರಹಗಳನ್ನ ! ಬುದ್ಧಿ ಗಿದ್ಧಿ ಇದೆಯೋ ಇಲ್ಲವೋ ಅವರಿಗೆ ?

ಪುಟ್ಟಮ್ಮಣ್ಣಿ—ಮಹಾರಾಜರವರ ಹತ್ತಿರ ಸನ್ನಿಧಾನದ ಮಾತಿಗೆ ಅಡ್ಡೀನೇ ಇಲ್ಲವಲ್ಲಾ. ಇಂಥಾ ಒಡವೆ ಕೊಂಡುಕೊಳ್ಳೋ ದಕ್ಕೆ ಮಹಾಸ್ವಾಮಿಯವರು ಎಷ್ಟು ಸಾವಿರ ವರಹಾ ಬೇಕಾ ದರೂ ಸಂತೋಷದಿಂದ ಕೊಡುತಾರೆ. ಕರ್ಣಾಟಕ

ಸಾಮ್ರಾಜ್ಯಕ್ಕೆಲ್ಲಾ ಮಹಾರಾಣಿಯವರಾದ ತಾವಲ್ಲದೆ ಇನ್ನು ಯಾರು ತೆಗೆದುಕೋಬೇಕಮ್ಮಾ ಆ ಒಡವೆಗಳನ್ನ !

ಚಿನ್ನಾದೇವಿ—ಈಗ ಸದ್ಯಕ್ಕೆ ಒಡವೆಗಳನ್ನು ಕೊಂಡುಕೊಡೋದಕ್ಕೆ ಮಹಾಸ್ವಾಮಿಯವರು ಒಪ್ಪುವಂತೆ ಕಾಣೆ. ನಿನ್ನೆ ತಾನೆ ಅವರು ಸಾವಿರ ಅರಬ್ಬಿ ಕುದುರೆಗಳನ್ನು ಕೊಂಡುಕೊಂಡರಂತೆ. (ಎಂದು ಪುನಃ ಒಡವೆಗಳನ್ನು ನೋಡುತ್ತಾ) ಆದರೇನು, ಈ ಒಡವೆಗಳು ಬಹಳ ಚೆನ್ನಾಗಿವೆ ಪುಟ್ಟೊ. ಬಿಡೋದಕ್ಕೆ ನನಗೆ ಇಷ್ಟವೇ ಇಲ್ಲ; ಕೊಂಡುಕೊಂಡೇ ಬಿಡುತೇನೆ ಹೋಗು, ನಾನೇನು ಮಹಾರಾಜರ ಪಟ್ಟದರಸಿಯಲ್ಲವೆ ! ಹೋಗು, ಆ ವರ್ತಕರ ಸಂಗಡ ಇನ್ನು ಸ್ವಲ್ಪ ವ್ಯಾಪಾರ ಮಾಡಿ ನೋಡು, ಬೆಲೆಯೇನಾದರೂ ಕಡಿಮೆ ಮಾಡುತಾರೇನೋ. ಅವರು ಕೇಳಿದಷ್ಟು ನಾನು ಖಂಡಿತ ಕೊಡೋದಿಲ್ಲ. (ದಾದಿಯು ವರ್ತಕರ ಬಳಿಗೆ ಹೋಗುವಳು. ಒಬ್ಬ ಚಾರನು ಒಳಗೆ ಬಂದು ನಮಸ್ಕಾರಮಾಡುವನು.) ಏನು ಸಮಾಚಾರ ?

ಚಾರ—ಯಾರೋ ಒಬ್ಬ ಹೆಂಗಸು ಸನ್ನಿಧಾನದಲ್ಲಿ ಮಾತಾಡಬೇಕೆಂದು ಬಂದಿದಾಳೆ. ಸನ್ನಿಧಾನದ ಪರಿಚಯ ತನಗುಂಟೆಂದು ಹೇಳುತಾ ಇದಾಳೆ.

ಚಿನ್ನಾದೇವಿ—ಯಾರವಳು ?

ಚಾರ—ಆಕೆ ತನ್ನ ಹೆಸರನ್ನು ಹೇಳೋದಿಲ್ಲ ತಾಯಿ, ಸುಮ್ಮನೆ ಅಳುತಾ ಇದಾಳೆ.

ಚಿನ್ನಾದೇವಿ—ಸರಿ, ಒಳಗೆ ಕಳುಹಿಸು. (ಚಾರನು ಹೋಗುವನು. ಗೌರಿಯು ಅಳುತ್ತಾ ಒಳಗೆ ಬಂದು ಮಾತಾಡದೆ ಸುಮ್ಮನೆ

ಹಾಗೆಯೇ ಅಳುತ್ತಾ ನಿಲ್ಲುವಳು.) ಯಾರು ನೀನು? ಏನು ಸಮಾಚಾರ?

ಗೌರಿ—ಅಯ್ಯೋ! ಯಾರು ಅಂತ ಹೇಳಲೀವ್ಮಾ ಪಾಪಿಷ್ಠೆ ಪರ ದೇಶೀನ, ಅಯ್ಯೋ! (ಎಂದು ಅಳುತ್ತಿರುವಳು.)

ಪುಟ್ಟಮ್ಮಣ್ಣಿ—(ಗೌರಿಯ ಬಳಿಗೆ ಬಂದು) ಹುಶ್, ಹಾಗೆಲ್ಲಾ ಹೆಚ್ಚಾಗಿ ಅತ್ತುಗಿತ್ತು ಗಲಾಟೆಮಾಡಬಾರದಮ್ಮಾ, ಮಹಾರಾಣಿ ಯವರ ಸನ್ನಿಧಾನ ಇದು. ನಿನ್ನ ಕಷ್ಟ ಏನೋ ಹೇಳಿಕೋ ಬೇಗ.

ಗೌರಿ—ಕಷ್ಟಾನೇ! ಅಯ್ಯೋ ನನ್ನ ಕಷ್ಟ ಏನಂತ ಹೇಳ ಲೀವ್ಮಾ! ಆಗಿಹೋಯಿತು. ನನ್ನ ಗತಿ ಆಗಿಹೋಯಿತು, ಅಯ್ಯೋ!

ಚಿನ್ನಾದೇವಿ—ಏನು ವಿಪತ್ತು ಬಂದಿದೆಯಮ್ಮಾ ನಿನಗೆ, ಹೇಳ ಬಾರದೆ?

ಗೌರಿ—ನಮ್ಮ ಯಜಮಾನರು....ಅಯ್ಯೋ! ಹಿಂದಿನ ಜನ್ಮದಲ್ಲಿ ಎಷ್ಟು ಪಾಪ ಮಾಡಿದ್ದೆನೋ ಏನೋ....ನನ್ನ ಮಂಗಳ ಸೂತ್ರ ಹರಿದುಹೋಯಿತಲ್ಲಮ್ಮಾ! ನಮ್ಮ ಮನೆ ಮಠ ಎಲ್ಲಾ ಮಾರಿದರೂ ಅವರ ಉತ್ತರಕ್ರಿಯೆಗಳಿಗೇ ದುಡ್ಡು ಹೊರಡೋದಿಲ್ಲವಲ್ಲಾ! ಅಯ್ಯೋ! ಇಂಥಾ ಕಾಲ ಬರ ಬಹುದೆ, ನಮ್ಮ ಯಜಮಾನರಂಥ ಶ್ರೋತ್ರಿಯ ಬ್ರಾಹ್ಮಣ ರಿಗೆ! ಉತ್ತರಕ್ರಿಯೆಗಳಿಲ್ಲದೆ ಸಾಯೋದೇ! ನಾನಾದರೂ ಪ್ರಾಣಬಿಡುತೇನೆ, ಹಾಗಾಗೋದಕ್ಕಿಂತ!

ಚಿನ್ನಾದೇವಿ—ಎಂಥಾ ಪತಿಭಕ್ತಿಯಮ್ಮಾ ನಿನ್ನದು! ಅದಿರಲಿ, ನಿನಗೆ ನಮ್ಮ ಪರಿಚಯವುಂಟೆಂದು ಹೇಳಿದೆಯಂತಲ್ಲಾ, ನೀನು ಯಾರಮ್ಮಾ?

ಗೌರಿ—ನನ್ನ ಹೆಸರು ಗೌರಿ. ಮಹಾರಾಣಿಯುವರಾಗಲೇ ನನ್ನ ಮರೆತುಬಿಟ್ಟಂತೆ ತೋರುತ್ತೆ. ಈಗ ಆರುತಿಂಗಳಿಂದೀಚೆಗೆ ಒಂದೆರಡು ಸಲ ಬಂದು ನಾನು ಸನ್ನಿಧಾನದ ಬಟ್ಟೆಗಳಿಗೆ ಕಸೂತಿ ಕೆಲಸ ಮಾಡಿಕೊಟ್ಟಿರಲಿಲ್ಲವೆ? ಅಯ್ಯೋ! ಈ ಪ್ರಪಂಚದಲ್ಲೀ ನನ್ನಂಥಾ ದುರದೃಷ್ಟವಂತೆ ಇಲ್ಲಮ್ಮಾ, ಅಂಥಾ ಗಂಡನ್ನ ಕಳಕೊಳ್ಳೋದಕ್ಕೆ! ಹೇಗಾದರೂ ಮಾಡಿ ಕಾಪಾಡಬೇಕು ತಾಯಿ ನಮ್ಮನ್ನ, ಅಯ್ಯೋ!

ಚಿನ್ನಾದೇವಿ—ಹೌದು, ಈಗ ಸ್ವಲ್ಪ ನೆನಪಾಯಿತು ನೀನು ಯಾರು ಅಂತ. ಪುಟ್ಟಮ್ಮ, ನನ್ನ ಪೆಟ್ಟಿಗೆ ತೆಗೆದು ನೂರು ವರಹಾ ಕೊಡೆ ಈಕೆಗೆ.

(ದಾದಿಯು ಹಾಗೆಯೇ ಮಾಡುವಳು)

ಗೌರಿ—(ಹಣವನ್ನು ತೆಗೆದುಕೊಂಡು ಹೋಗುತ್ತಾ) ದೇವರು ನಿಮಗೆ ಒಳ್ಳೇದು ಮಾಡಲಮ್ಮಾ! ಆ ಭಗವಂತ ನಿಮಗೆ ಮಕ್ಕಳು ಮರಿ ಸೌಮಂಗಲ್ಯ ಕೊಟ್ಟು ಕಾಪಾಡಲಮ್ಮಾ! ಆ ಶ್ರೀ ರಾಮಚಂದ್ರ....

ಚಿನ್ನಾದೇವಿ—ಸಾಕು, ಸಾಕು, ಹೋಗಿಬಾರಮ್ಮಾ. (ಗೌರಿಯು ಹೋಗುವಳು.) ಇನ್ನು ಈ ಒಡವೆಗಳ ವಿಚಾರ. ಹೇಗಾದರೂ ಸರಿಯೇ, ತೆಗೆದುಕೊಂಡೇ ಬಿಡುತ್ತೇನೆ. ಪುಟ್ಟಮ್ಮ, ವ್ಯಾಪಾರ ಮಾಡಿದೆಯಾ?

ಪುಟ್ಟಮ್ಮಣ್ಣಿ—ಮಾಡಿದೆ ತಾಯಿ. ನೂರು ನೂರು ವರಹಾ ಕಮ್ಮಿ ಮಾಡುತಾರಂತೆ ಒಂದೊಂದಕ್ಕೂ, ಇನ್ನು ಹೆಚ್ಚಿಗೆ ಆಗೋದಿಲ್ಲವಂತೆ. (ತೆರೆಯ ಹಿಂದೆ ವಾದ್ಯಗಳ ಸದ್ದಾಗುವುದು; ವಂದಿಗಳು ಭೋ ಪರಾಕ್! ಎಂದು ಹೇಳುವರು.) ಓಹೋ ಮಹಾಸ್ವಾಮಿಯವರ ಸವಾರಿ ಈ ಕಡೆಯೇ ಬಿಜಯಮಾಡಿಸುತಾ ಇದೆ.

ಚಿನ್ನಾದೇವಿ—ಬೇಗ, ಎಲ್ಲಾ ದೂರ ಸರಿಯಿರಿ. (ವರ್ತಕರು ಹೊರಗೆ ಹೋಗುವರು.) ನಾನು ಈ ಒಡವೆಗಳನ್ನೆಲ್ಲಾ ಧರಿಸಿಕೊಂಡು ಮಹಾಸ್ವಾಮಿಯವರ ಔದಾರ್ಯವನ್ನು ಪರೀಕ್ಷಿಸುತೇನೆ.

(ಚಿನ್ನಾದೇವಿ ಎದ್ದು ಒಡವೆಗಳನ್ನು ಸರಿಮಾಡಿಕೊಳ್ಳುವಳು. ಹೊಗಳುಭಟರು ಹೊರಗಡೆ ಬಿರುದಾವಳಿಗಳನ್ನು ಹೇಳುತ್ತಿರುವರು)

೧ನೆಯ ವಂದಿ—ಶ್ರೀಮತ್ಸಮಸ್ತ ಭುವನಾಧೀಶ್ವರಾ!

೨ನೆಯ ವಂದಿ—ಹಿಂದೂರಾಯ ಸುರತ್ರಾಣ!

೧ನೆಯ ವಂದಿ—ಅರಿರಾಜ ಭಯಂಕರಾ!

೨ನೆಯ ವಂದಿ—ಗಜಪತಿ ವಿಭಾಡ!

೧ನೆಯ ವಂದಿ—ಕರ್ಣಾಟಕ ಸಿಂಹಾಸನಾಧೀಶ್ವರಾ!

೨ನೆಯ ವಂದಿ—ಭಾಷೆಗೆ ತಪ್ಪುವ ರಾಯರ ಗಂಡ!

೧ನೆಯ ವಂದಿ—ಮೂರು ರಾಯರ ಮಿಂಡ!

೨ನೆಯ ವಂದಿ—ಅರೀಭ ಗಂಡಭೇರುಂಡ!

೧ನೆಯ ವಂದಿ—ಸಕಲಜ್ಞಾನ ಮಾರ್ತಾಂಡ!

೨ನೆಯ ವಂದಿ—ಶ್ರೀಮನ್ಮಹಾರಾಜಾಧಿರಾಜ!

೧ನೆಯ ವಂದಿ—ರಾಜ ಪರಮೇಶ್ವರ!

೨ನೆಯ ವಂದಿ—ಶ್ರೀ ವೀರಪ್ರತಾಪ!

೧ನೆಯ ವಂದಿ—ಶ್ರೀ ಕೃಷ್ಣದೇವರಾಯ ಸಾರ್ವಭೌಮಾ!

೨ನೆಯ ವಂದಿ—ಭೋ ಪರಾಕ್!

(ಬಿರುದಾವಳಿಗಳು ಮುಗಿಯುತ್ತಾ ಬರುವಾಗ ಇಬ್ಬರು ಚಾರರು ಒಳಗೆ ಬಂದು ಒಂದೊಂದು ಕಡೆಗೆ ಒಬ್ಬೊಬ್ಬರು ದೂರವಾಗಿ ಕೈಕಟ್ಟಿ ನಿಲ್ಲುವರು. ತರುವಾಯ ಮಂತ್ರಿ ತಿಮ್ಮಪ್ಪಾಜಿಯ ಸಂಗಡ ಕೃಷ್ಣದೇವರಾಯರು ಒಳಗೆ ಬರುವರು. ಚಿನ್ನಾದೇವಿಯು ಮಹಾರಾಜರಿಗೆ ನಮಸ್ಕಾರಮಾಡುವಳು. ಆ ಮೇಲೆ ಮಹಾರಾಜರು ಮಂಚದ ಮೇಲೆ ಕುಳಿತುಕೊಳ್ಳುವರು.

ಚಿನ್ನಾದೇವಿಯು ಪಕ್ಕದಲ್ಲಿ ಕುಳಿತುಕೊಳ್ಳುವಳು. ಅಪ್ಪಾಜಿಯು ಮಹಾರಾಜರ ಬಲಗಡೆ ಸ್ವಲ್ಪ ದೂರದಲ್ಲಿ ನಿಲ್ಲುವನು. ಪುಟ್ಟಮ್ಮಣ್ಣಿಯು ಮಹಾರಾಣಿಯ ಎಡಗಡೆ ಸ್ವಲ್ಪ ದೂರದಲ್ಲಿ ನಿಲ್ಲುವಳು.)

ಕೃಷ್ಣದೇವರಾಯ—ಇದೇನು ಚಿನ್ನಾ, ಇಂದೇನೋ ಹೊಸ ರೀವಿಯಿಂದ ಕಾಣುತಿದೀಯಲ್ಲ ? ಈ ರತ್ನಹಾರ ಹೊಸದಾಗಿ ಕಾಣುತ್ತೆ. ಏನೋ ವಿಶೇಷವಿರಬೇಕು.

ಚಿನ್ನಾದೇವಿ—ಮಹಾಸ್ವಾಮಿಯವರ ಸವಾರಿ ಒಳ್ಳೆಯ ಸಮಯಕ್ಕೇ ಇಲ್ಲಿಗೆ ಚಿತ್ತೈಸಿತು. ಈಗ ತಾನೆ ಕೆಲವರು ರತ್ನಪಡಿವ್ಯಾಪಾರಿಗಳು ಈ ರತ್ನಾಭರಣಗಳನ್ನು ಮಾರಲು ನನ್ನಲ್ಲಿಗೆ ತಂದಿದ್ದಾರೆ. ಚೆನ್ನಾಗಿಲ್ಲವೆ ?

ಕೃಷ್ಣದೇವರಾಯ—ತುಂಬಾ ಸೊಗಸಾಗಿದೆ ಚಿನ್ನಾ. ಅವುಗಳನ್ನು ಧರಿಸಿರೋದರಿಂದ ನಿನ್ನ ಸೌಂದರ್ಯಕ್ಕೆ ಒಪ್ಪಹಾಕಿದಹಾಗಿದೆ.

ಚಿನ್ನಾದೇವಿ—ಇವು ಸುಮಾರು ಎಷ್ಟು ಬೆಲೆ ಬಾಳುತ್ತೆ ಅಂದುಕೊಂಡಿದೀರಿ ? ಆ ದುರಾಸೆ ವರ್ತಕರು ಐದು ಸಾವಿರ ವರಹಾ ಕೇಳಿದರು ಇವಕ್ಕೆಲ್ಲಾ. ನಮ್ಮ ಪುಟ್ಟಮ್ಮನೇ ವ್ಯಾಪಾರಮಾಡಿದಳು ಅವರ ಸಂಗಡ. (ಎಂದು ತಕ್ಷಣ ಏನೋ ಜ್ಞಾಪಕಬಂದಂತೆ) ಅಂದ ಹಾಗೆ, ನೋಡಿ, ನೆನಪಾಯಿತು. ತಾವು ಬರೋದಕ್ಕೆ ಕೊಂಚ ಹೊತ್ತಿಗೆ ಮುಂಚೆ ಇಲ್ಲಿ ನನ್ನ ಮಹಲಿನಲ್ಲಿ ಒಂದು ವಿಶೇಷ ನಡೆಯಿತು. ಯಾರೋ ಒಬ್ಬ ಬಡ ಹೆಂಗಸು ಬಂದು—ಪಾಪ, ಗಂಡ ಸತ್ತುಹೋದನಂತೆ—ಉತ್ತರಕ್ರಿಯೆಗಳಿಗಾಗಿ ಹಣವನ್ನು ಬೇಡಿ ತೆಗೆದುಕೊಂಡುಹೋದಳು.

ಕೃಷ್ಣದೇವರಾಯ—(ಸ್ವಲ್ಪ ಆಶ್ಚರ್ಯದಿಂದ) ಯಾರವಳು ನಿನ್ನ ಹತ್ತಿರಕ್ಕೆ ಬಂದಿದ್ದವಳು ?

ಚಿನ್ನಾದೇವಿ—ಓ.... ಅವಳ ಹೆಸರೇನೆ ಪುಟ್ಟೊ?

ಪುಟ್ಟಮ್ಮಣ್ಣಿ—ಗೌರಿ. ರಾಮಕೃಷ್ಣಯ್ಯನ ಹೆಂಡತಿಯಂತೆ.

ಕೃಷ್ಣದೇವರಾಯ—(ಸ್ವಲ್ಪ ಅನುಮಾನದಿಂದ) ಯಾವ ರಾಮ ಕೃಷ್ಣಯ್ಯ?

ಚಿನ್ನಾದೇವಿ—ಯಾರೋ ಈಗ ಆರು ತಿಂಗಳಿಂದೀಚೆ ಈ ಊರಿಗೆ ಬಂದನಂತಲ್ಲಾ. ಏನೋ ಹಾಸ್ಯವೋ, ಕವಿತ್ವವೋ ಮಾಡಿ ಜೀವನ ಸಂಪಾದಿಸಿಕೊಳ್ಳುತಾ ಇದ್ದನಂತೆ. ಈ ಊರಿಗಿನ್ನೂ ಹೊಸಬನಾಗಿದ್ದ.

ಕೃಷ್ಣದೇವರಾಯ—ಛೇ, ಛೇ! ಆ ರಾಮಕೃಷ್ಣ ಎಂದಿಗೂ ಇರ ಲಾರದು. ಅವನು ಈಗ ತಾನೇ ನನ್ನ ಹತ್ತಿರ ಬಂದು ತನ್ನ ಹೆಂಡತಿ ಸತ್ತುಹೋದಳು ಎಂದು ಅತ್ತು ಗೋಳಾಡಿ ಹೋದ. ಅಪ್ಪಾಜಿಯವರು ಕೂಡ ನೋಡಿದಾರೆ ಅದನ್ನ.

ತಿಮ್ಮಪ್ಪಾಜಿ—ಹೌದು ಮಹಾಸ್ವಾಮಿ, ಅವನಿಗೆ ಹೆಂಡತಿಯ ಉತ್ತರಕ್ರಿಯೆಗಳಿಗಾಗಿ ಪ್ರಭುಗಳು ನನ್ನ ಕೈಲಿ ಇನ್ನೂರು ವರಹಾ ಕೊಡಿಸಿದಿರಲ್ಲಾ.

ಚಿನ್ನಾದೇವಿ—ಇಲ್ಲ, ಇಲ್ಲ. ಆ ರಾಮಕೃಷ್ಣನ ಹೆಂಡತಿ ಗೌರೀನೇ ಇಲ್ಲಿಗೆ ಬಂದಿದ್ದವಳು. ಅವಳು ಹಿಂದೆ ಒಂದೆರಡು ಸಲ ನನಗೆ ಒಳ್ಳೆಯ ಕಸೂತಿ ಕೆಲಸ ಮಾಡಿಕೊಟ್ಟಿದಾಳೆ. ಪಾಪ, ಅವಳ ಗಂಡ ಸತ್ತುಹೋದನಂತೆ!

ಕೃಷ್ಣದೇವರಾಯ—ಇಲ್ಲ ಚಿನ್ನಾ, ನೀನೆಲ್ಲೋ ಮೋಸಹೋಗಿ ದೀಯೆ. ಆ ರಾಮಕೃಷ್ಣನ್ನ ನಾನು ಈಗ ತಾನೇ ನೋಡಿ ಬಂದಿದೇನೆ.



ಕೃಷ್ಣದೇವರಾಯ——....ಅಪ್ಪಾಜಿಯವರೇ, ಇದೇನೋ ಸ್ವಲ್ಪ ವಿಚಿತ್ರವಾಗಿದೆ!

ಚಿನ್ನಾದೇವಿ—ಇಲ್ಲ, ಇಲ್ಲ. ಮಹಾಸ್ವಾಮಿಯವರೇ ಮೋಸಹೋಗಿರಬೇಕು. ಇನ್ನು ಯಾರನ್ನೋ ನೋಡಿ ರಾಮಕೃಷ್ಣನೆಂದು ನಿಮಗೆ ಭ್ರಾಂತಿ ಬಂದಿರಬೇಕು.

ಕೃಷ್ಣದೇವರಾಯ—ನನಗಲ್ಲ ಚಿನ್ನಾ, ಭ್ರಾಂತಿ; ನೀನೀಗ ಮೋಸಹೋಗಿದೀಯೆ. ಖಂಡಿತವಾಗಿಯೂ ಆ ರಾಮಕೃಷ್ಣನೇ ಈಗ ಸ್ವಲ್ಪ ಹೊತ್ತಿಗೆ ಮುಂಚೆ ನನ್ನ ಬಳಿಗೆ ಬಂದಿದ್ದವನು. ಸುಮಾರು ಆರು ತಿಂಗಳ ಕೆಳಗೆ ಅವನು ಈ ಊರಿಗೆ ಬಂದಂತೆ ಕಾಣುತ್ತೆ. ಒಂದೇ ಒಂದು ಸಲ ಯಾವುದೋ ಒಂದು ಗೂಬೆ ಕವಿತ್ವ ಮಾಡಿಕೊಂಡು ನಮ್ಮ ಆಸ್ಥಾನಕ್ಕೆ ಕೂಡ ಬಂದ ಹಾಗೆ ಜ್ಞಾಪಕ ನನಗೆ.

ಚಿನ್ನಾದೇವಿ—ಇಲ್ಲ, ಮಹಾಸ್ವಾಮಿಯವರೇ ಮೋಸಹೋಗಿದಾರೆ. (ಎಂದು ದಾದಿಯ ಕಡೆ ನೋಡಿ) ನೀನೇ ಸಾಕ್ಷಿ ನನಗೆ, ಪುಟ್ಟೂ, ಇಲ್ಲಿಗೆ ಬಂದಿದ್ದವಳು ಗೌರಿಯೇ ಅನ್ನೋದಕ್ಕೆ. ನಾನು ರಾಮಕೃಷ್ಣಯ್ಯನ್ನ ನೋಡಿಲ್ಲ; ಆದರೆ ಗೌರೀನ ಬಲ್ಲೆ.

ಕೃಷ್ಣದೇವರಾಯ—(ಕೋಪವನ್ನು ನಟಿಸಿ ಎದ್ದುನಿಂತು) ಹೀಗೆಲ್ಲಾ ಮೊಂಡತನದಿಂದ ಎದುರುವಾದಿಸಿದರೆ ನನಗೆ ಸರಿಬೀಳುವುದಿಲ್ಲ. (ಎಂದು ಹೇಳಿ ಅಪ್ಪಾಜಿಯ ಬಳಿಗೆ ಸರಿದು ಬಂದು ನಿಲ್ಲುವನು. ಮಹಾರಾಣಿಯೂ ಕೋಪದಿಂದ ದಾದಿಯ ಕಡೆ ಮುಖ ತಿರುಗಿಸಿಕೊಂಡು ಕುಳಿತುಕೊಳ್ಳುವಳು. ಆಗ ದೊರೆಯು ಮಂತ್ರಿಗೆ ಮಾತ್ರ ಕೇಳುವಂತೆ) ಅಪ್ಪಾಜಿಯವರೇ, ಇದೇನೋ ಸ್ವಲ್ಪ ವಿಚಿತ್ರವಾಗಿದೆ! ಆ ರಾಮಕೃಷ್ಣನ್ನ ನೋಡಿದಾಗಲೇ ಬಹಳ ರಸಿಕನಂತೆ ಕಂಡುಬಂತು. ಯಾವುದೋ ಒಂದು ಶ್ಲೇಷಾಲಂಕಾರಕ್ಕಾಗಿ ಅವನ ಮೇಲೆ ಕೋಪಗೊಂಡಿದ್ದೆ. ಈಗ ಪುನಃ

ನಮ್ಮ ಅನುಗ್ರಹ ಸಂಪಾದನೆಗಾಗಿ ಏನೋ ಆಟ ಹೂಡಿದಾನೆಂದು ಕಾಣುತ್ತೆ.

**ತಿಮ್ಮಪ್ಪಾಜ**—ಹೌದು ಮಹಾಸ್ವಾಮಿ, ನನಗೂ ಹಾಗೆಯೇ ತೋರುತ್ತೆ.

**ಕೃಷ್ಣದೇವರಾಯ**—ಇರಲಿ ಬಿಡಿ, ನೋಡೋಣ. ರಾಣಿವಾಸದವರನ್ನು ಆಟವಾಡಿಸಲು ನಮಗೊಂದು ಒಳ್ಳೆಯ ಅವಕಾಶ ಸಿಕ್ಕಿತು. ನಾವು ಏನೂ ತಿಳಿಯದವರಂತೆಯೂ, ಮೋಸ ಹೋದವರಂತೆಯೂ ನಟಿಸೋಣ.

**ತಿಮ್ಮಪ್ಪಾಜ**—ಹಾಗೆಯೇ ಆಗಲಿ (ಎಂದು ಹೇಳಿ, ಆಮೇಲೆ, ಗಟ್ಟಿಯಾಗಿ ಮಹಾರಾಣಿಯನ್ನು ಮೂದಲಿಸುವಂತೆ) ಮಹಾಸ್ವಾಮಿಯವರು ಸಕಲ ವಿದ್ಯಾಪ್ರವೀಣರು! ಸರ್ವತಂತ್ರಸ್ವತಂತ್ರರು! ಸಕಲ ಜ್ಞಾನಮಾರ್ತಾಂಡರು!....

**ಚಿನ್ನಾದೇವಿ**—(ಸರಕ್ಕನೆ ತಿರುಗಿ, ಎದ್ದುನಿಂತು) ಆದರೇನು, ಮಹಾಸ್ವಾಮಿಯವರು ಕೂಡ ನನ್ನಲ್ಲಿ ತಪ್ಪುಹಿಡಿಯೋ ಹಾಗಿಲ್ಲ. ಅಲ್ಲ,—ಈಗತಾನೆ ಇಲ್ಲಿಗೆ ಬಂದು ಅತ್ತು ಗೋಳಾಡಿ ಹೋದ ಗೌರಿ ಸತ್ತುಹೋಗಿದಾಳೆ ಅಂದರೆ ನಂಬತಕ್ಕ ಮಾತೆ?

**ಕೃಷ್ಣದೇವರಾಯ**—(ಮೂದಲಿಸುವಂತೆ) ನಿಧಾನ, ಚಿನ್ನಾದೇವಿಯವರೇ, ನಿಧಾನ, ಮೋಸಹೋಗಿದೀರಿ ತಾವು! ನಾನೆಂದಿಗೂ ಹಾಗೆ ತಪ್ಪಿನಲ್ಲಿ ಬೀಳೋದಿಲ್ಲ. ನೀವು 'ಸತ್ತುಹೋದ' ಎಂದು ಹೇಳೋ ರಾಮಕೃಷ್ಣನ್ನ ಕೊಂಚ ಹೊತ್ತಿಗೆ ಮುಂಚೆ ನಾನು ನನ್ನ ಆಸ್ಥಾನದಲ್ಲಿ, ಇದೇ ಕಣ್ಣುಗಳಿಂದ ನೋಡಿರದೇ ಇದ್ದ ಪಕ್ಷದಲ್ಲಿ ನೀವೇನು ಬೇಕಾದರೂ ಕೇಳಿ, ಕೊಡುತೇನೆ.

ಚಿನ್ನಾದೇವಿ—ಹಾಗಾದರೆ ಪಂಥವೋ ಇದು? ಸರಿ, ನನಗೂ ಸಮ್ಮತವೇ. ನೀವು 'ಸತ್ತುಹೋದಳು' ಎಂದು ಹೇಳೋ ಗೌರೀನ ನಾನೂ ಇದೇ ಸ್ಥಳದಲ್ಲಿ ಇದೇ ಕಣ್ಣುಗಳಿಂದ ನೋಡಿರದೇ ಇದ್ದ ಪಕ್ಷದಲ್ಲಿ ನಿಮ್ಮ ಮಾತಿಗೆ ಇನ್ನೆಂದಿಗೂ ಎದುರಾಡುವುದೇ ಇಲ್ಲ.

ಕೃಷ್ಣದೇವರಾಯ—ಪಂಥವೋ ಇದು? ನನಗೂ ಸಮ್ಮತವೇ. ನೋಡೋಣ, ಯಾರು ಗೆಲ್ಲುವರೋ ಇದರಲ್ಲಿ. ಅದೇನು ನಿಮಿಷದಲ್ಲಿ ನಿರ್ಧರಿಸಬಹುದು ನಿಜಾಂಶವನ್ನ. (ಎಂದು ಮಂತ್ರಿಯಕಡೆ ತಿರುಗಿ ನೋಡುವನು.)

ತಿಮ್ಮಪ್ಪಾಜಿ—(ಮುಂದೆ ಬಂದು ನಮಸ್ಕಾರ ಮಾಡಿ) ಮಹಾಸ್ವಾಮಿಯವರ ಅಪ್ಪಣೆಯಾದರೆ ರಾಮಕೃಷ್ಣನ ಮನೆಗೆ ನಾನೇ ಹೋಗಿ ಸತ್ತಿರುವರು ಯಾರೋ ನೋಡಿಕೊಂಡು ಬರುತೇನೆ ಬೇಗ. (ದೊರೆಯು ಸಮ್ಮತಿಯನ್ನು ಸೂಚಿಸಲು ಅಪ್ಪಾಜಿಯು ಹೊರಡುವನು. ದೊರೆಯು ಪುನಃ ಮಂಚದ ಮೇಲೆ ಕುಳಿತುಕೊಳ್ಳುವನು.)

ಚಿನ್ನಾದೇವಿ—ಪುಟ್ಟಮ್ಮಣ್ಣಿ, ನೀನೂ ಹೋಗಿ ನೋಡಿಕೊಂಡು ಬಾ. (ದೊರೆಯ ಕಡೆ ತಿರುಗಿ) ಕ್ಷಮಿಸಬೇಕು, ಮಹಾಸ್ವಾಮಿಯವರು. ಆದರೆ ಒಬ್ಬರಿಗಿಂತ ಇಬ್ಬರು ಸಾಕ್ಷಿಗಳು ಲೇಸಲ್ಲವೆ? ಅದೂ ಅಲ್ಲದೆ ರಾಜ್ಯತಂತ್ರವಿಶಾರದರಾದ ಅಪ್ಪಾಜಿಯವರ ಮಾತು ಪೂರ್ತಿ ನಂಬಿಕೆಗೆ ಅರ್ಹವಾದ್ದಲ್ಲ. ರಾಮಕೃಷ್ಣನೇ ಸತ್ತಿರುವನೆಂದು ಪುಟ್ಟಮ್ಮಣ್ಣಿಯು ನಿರ್ಧರ ಮಾಡಿಕೊಂಡು ಬರುವಳು. (ಎಂದು ಹೇಳಿ ಪುಟ್ಟಮ್ಮಣ್ಣಿಯ ಕಡೆ ತಿರುಗಿ ನೋಡಲು ಅವಳು ಹೋಗುವಳು. ತರುವಾಯ ಮಹಾರಾಣಿಯು

ಮೆಲ್ಲಗೆ ಮಹಾರಾಜರ ಬಳಿಗೆ ಬಂದು ಕುಳಿತು) ಅವರಿಬ್ಬರೂ ಬಂದ ಮೇಲೆ ನನ್ನ ಪಂಥವೇ ಗೆದ್ದರೆ ಮಹಾಸ್ವಾಮಿಯವರು ತಮ್ಮ ಮಾತನ್ನು ನಡೆಸಿಕೊಡುವರಷ್ಟೆ ?

ಕೃಷ್ಣದೇವರಾಯ—ನಿನ್ನ ಪಂಥ ಗೆದ್ದರೆ! ಅಗತ್ಯವಾಗಿಯೂ.

ಚಿನ್ನಾದೇವಿ—(ಹಾಗಾದರೆ ಮಹಾಸ್ವಾಮಿಯವರು ನನ್ನ ಸೌಂದರ್ಯಕ್ಕೆ ಬಹಳ ಸೊಗಸಾಗಿ ಒಪ್ಪತಕ್ಕ ಈ ಒಡವೆಗಳನ್ನೆಲ್ಲಾ ಕೊಂಡುಕೊಡುವರೆ ಮತ್ತೆ ?)) (ಎಂದು ಚಾರನ ಕಡೆ ನೋಡಿ) ಯಾರಲ್ಲಿ, ಆ ವರ್ತಕರನ್ನು ಒಳಕ್ಕೆ ಬರಮಾಡು.

ಕೃಷ್ಣದೇವರಾಯ—(ನಗುತ್ತಾ) ಒಳ್ಳೆ ಜಾಣೆ ನೀನು, ಚಿನ್ನಾ. ಕಾರ್ಯವಾಸಿಗಳ ಲಕ್ಷಣ! (ವರ್ತಕರು ಬಳಿಗೆ ಬಂದು ನಮಸ್ಕಾರ ಮಾಡಿ ನಿಲ್ಲುವರು.) ನಿಮ್ಮ ಒಡವೆಗಳ ಬೆಲೆಯೇನ್ರಯ್ಯ ?

೧ನೆಯ ವರ್ತಕ—ನನ್ನ ಒಡವೆಗೆ ಸಾವಿರ ವರಹಾ ಮಹಾಸ್ವಾಮಿ.

೨ನೆಯ ವರ್ತಕ—ನಾನು ಕೊಟ್ಟಿರೋ ಒಡವೆಗೆ ಸಾವಿರದೈನೂರು ವರಹಾ ಮಹಾಪ್ರಭು.

೩ನೆಯ ವರ್ತಕ—ನಾನು ತಂದಿರೋ ಒಡವೆಗೆ ಎರಡು ಸಾವಿರ ವರಹಾ ಮಹಾಪ್ರಭು.

ಕೃಷ್ಣದೇವರಾಯ—ಏನೇನು ಈ ಮಹಾ ರತ್ನಗಳಿಗೆ? ನಾಲ್ಕು ಸಾವಿರದೈನೂರು ವರಹಾ ಬೆಲೆ! ಅದೆಲ್ಲಾ ಆಗತಕ್ಕದ್ದಲ್ಲ. ಈ ನಿಮ್ಮ ರತ್ನಗಳನ್ನು ಮೀರಿಸುವ ಸಾವಿರಾರು ಒಡವೆಗಳು ನಮ್ಮ ಭಂಡಾರದಲ್ಲಿ ಬಿದ್ದಿವೆ. ನಿಮಗೇನಾದರೂ ಮಾರಾಟವಾಗಬೇಕೆಂದು ಇಷ್ಟವಿದ್ದರೆ ಸರಿಯಾದ ಬೆಲೆ ಹೇಳಿ.

೧ನೆಯ ವರ್ತಕ—ಮಹಾಸ್ವಾಮಿಯವರ ಚಿತ್ತ. ಆದರೆ....

೨ನೆಯ ವರ್ತಕ—ನಾವು ಕೇಳಿದ್ದೇನೂ ಹೆಚ್ಚಲ್ಲ. ಮಹಾಸ್ವಾಮಿಯವರು ದಯಪಾಲಿಸಬೇಕು.

ಕೃಷ್ಣದೇವರಾಯ—ಅದೊಂದೂ ಆಗತಕ್ಕದ್ದಲ್ಲ. ನಾವೇನಾದರೂ ಒಡವೆಗಳನ್ನು ತೆಗೆದುಕೊಳ್ಳುವ ಪಕ್ಷದಲ್ಲಿ....(ಎಂದು ಮಹಾರಾಣಿಯ ಕಡೆ ನೋಡಿ) ತೆಗೆದುಕೊಳ್ಳುವುದೇನೋ ಅನುಮಾನವೇ. (ಮಹಾರಾಣಿಯು ಮುಖವನ್ನು ತಿರುಗಿಸುವಳು.)—ನಿಮಗೆ ಎಲ್ಲಾ ಒಟ್ಟು ಎರಡು ಸಾವಿರ ವರಹಗಳಿಗಿಂತ ಹೆಚ್ಚಾಗಿ ದೊರೆಯಲಾರದು.

೩ನೆಯ ವರ್ತಕ—ಮಹಾಪ್ರಭುಗಳು ಪ್ರಸನ್ನರಾಗಬೇಕು. ತಾವು ಅಪ್ಪಣೆ ಕೊಡಿಸಿದ್ದು ಬಹಳ ಕಡಿಮೆ. ನಾವು ಕೊಟ್ಟಿರುವ ಬೆಲೆಯೇ ಅದಕ್ಕೆ ಎರಡರಷ್ಟಿದೆಯಲ್ಲಾ. ಕ್ಷಮಿಸಬೇಕು, ಮಹಾಸ್ವಾಮಿ! ನಮ್ಮ ರತ್ನಗಳು ಬಹಳ ಅನರ್ಘವಾದವುಗಳು.

('ಮಾರೀಚ' ರಾಮಯ್ಯನೆಂಬ ಗುಪ್ತಚಾರನು ಒಳಗೆ ಬಂದು ದೊರೆಗೆ ನಮಸ್ಕಾರ ಮಾಡಿ ನಿಲ್ಲುವನು.)

ಕೃಷ್ಣದೇವರಾಯ—ಏನು ರಾಮಯ್ಯ, ಸಮಾಚಾರ?

'ಮಾರೀಚ' ರಾಮಯ್ಯ—ಮಹಾಪ್ರಭು! ನಾನು ಎಂದಿನಂತೆ ನಗರ ಸಂಚಾರ ಮಾಡುತಾ ಬರಲು ಈ ಕೋಟೆಯ ಬಾಗಿಲಿಗೆ ಸ್ವಲ್ಪ ದೂರದಲ್ಲಿ ಒಂದು ವರ್ತಕರ ಗಾಡಿ ಇತ್ತು. ಅದರ ಬಳಿ ಒಬ್ಬ ಮನುಷ್ಯ ಹೆಣ ಬಿದ್ದಂತೆ ಮೈಮರೆತು ಬಿದ್ದಿದ್ದ. ಆ ಗಾಡಿ ಯಾರದೆಂದು ನೆರೆಹೊರೆಯವರನ್ನು ಕೇಳಲು ಯಾರೋ ಗೋಲ್ಕೊಂಡದ ರತ್ನಪಡಿ ವ್ಯಾಪಾರಿಗಳದೆಂದು ತಿಳಿಯಬಂತು. ಮಹಾಸ್ವಾಮಿಯವರು ಪರಾಂಬರಿಸಬೇಕು.

ಕೃಷ್ಣದೇವರಾಯ—ಏನು ಏನು, ಗೋಲ್ಕೊಂಡದ ವರ್ತಕರದೇ ? (ಎಂದು ವರ್ತಕರ ಕಡೆ ತಿರುಗಿ) ನಿಮ್ಮದೇನಯ್ಯಾ ಆ ಗಾಡಿ ?

೨ನೆಯ ವರ್ತಕ—ತಿಳಿಯದು ಮಹಾಸ್ವಾಮಿ ! ಸನ್ನಿಧಾನಕ್ಕೆ ಬೇಗ ಬರಬೇಕೆಂಬ ಆತುರದಲ್ಲಿ ನಮ್ಮ ಗಾಡಿಯನ್ನು ಪೇಟೆಯಲ್ಲಿ ವಿಶೇಷ ಜನಸಂಚಾರವಿಲ್ಲದ ಕಡೆ ಬಿಟ್ಟು ಬಂದೆವು. ಗಾಡಿಯ ಬಳಿ ಇನ್ನ್ಯಾರೂ ಇರಲಿಲ್ಲ ಮಹಾಪ್ರಭು !

ಕೃಷ್ಣದೇವರಾಯ—ತಕ್ಷಣ ಹೋಗಿ ಆ ಗಾಡಿ ನಿಮ್ಮದೇನೋ ನೋಡಿಕೊಂಡು ಬನ್ನಿ. (ಎಂದು ಗುಪ್ತಚಾರನ ಕಡೆ ತಿರುಗಿ) ರಾಮಯ್ಯ, ಇವರೊಡನೆ ನೀನೂ ಹೋಗಿ, ಬರುವಾಗ ಆ ಮೈಮರೆತು ಬಿದ್ದಿರುವವನನ್ನು ತೆಗೆದುಕೊಂಡು ಬಾ ಇಲ್ಲಿಗೆ.

'ಮಾರೀಚ' ರಾಮಯ್ಯ—ಅಪ್ಪಣೆ. (ಎಂದು ವರ್ತಕರೊಡನೆ ಹೋಗುವನು.)

ಕೃಷ್ಣದೇವರಾಯ—ಬಹಳ ತಮಾಷೆಯಾಗಿದೆಯಲ್ಲವೇ ಚಿನ್ನಾ, ಈ ದಿನ, ವಿಚಿತ್ರದ ಮೇಲೆ ವಿಚಿತ್ರ. ಅದಿರಲಿ, ಅಪ್ಪಾಜಿಯವರು ಯಾವಾಗ ತಿರುಗಿ ಬರುತಾರೋ, ನನ್ನ ಪಂಥ ಯಾವಾಗ ಗೆಲ್ಲುತ್ತೋ ಎಂದು ಆತುರವಾಗಿದೆ ನನಗೆ.

ಚಿನ್ನಾದೇವಿ—(ದೊರೆಯ ಧ್ವನಿಯನ್ನೇ ಅನುಕರಿಸಿ) ನಾನು ಕಳಿಸಿದ ಪುಟ್ಟಿಯೂ ಯಾವಾಗ ಬರುತಾಳೋ ನನ್ನ ಪಂಥ ಯಾವಾಗ ಗೆಲ್ಲುತ್ತೋ ಎಂದು ನನಗೂ ಆತುರವೇ ಆಗಿದೆ.

ಕೃಷ್ಣದೇವರಾಯ—ಅವರಿಬ್ಬರೂ ಏನಾದರೂ ರಾಮಕೃಷ್ಣನೇ ಸತ್ತಿದಾನೆ ಎಂದು ಹೇಳಿದರೆ ಅವರಿಬ್ಬರೂ ಸುಳ್ಳುಗಾರರೇ ಸರಿ.

ಚಿನ್ನಾದೇವಿ—(ದೊರೆಯ ಧ್ವನಿಯನ್ನೇ ಅನುಕರಿಸಿ) ಇಬ್ಬರೂ ಏನಾದರೂ ಗೌರೀನೇ ಸತ್ತಿದ್ದಾಳೆ ಎಂದು ಹೇಳಿದರೆ ನಂಬತಕ್ಕ ಮಾತೇ ಅಲ್ಲ. ನಿಜ ಯಾವುದು ಎಂದು ನನ್ನ ಮನಸ್ಸಿಗೇ ಗೊತ್ತು. ಇದೆಲ್ಲಿ ಹೋದಳು ಪುಟ್ಟಿ ಇಷ್ಟು ಹೊತ್ತು?

ಕೃಷ್ಣದೇವರಾಯ—ಇದೆಲ್ಲಿ ಹೋದರು ಅಪ್ಪಾಜಿ ಇಷ್ಟು ಹೊತ್ತು? ಶುದ್ಧ ಜಡಭರತ! (ಎಂದು ಮೇಲಕ್ಕೆದ್ದು) ಏನು ಚಿನ್ನಾ, ಇಲ್ಲಿ ಸುಮ್ಮನೆ ಕುಳಿತು ಕಾಯೋದಕ್ಕಿಂತ ನಾವಿಬ್ಬರೂ ರಾಮಕೃಷ್ಣನ ಮನೆಗೇ ಹೋಗಿ ಯಥಾರ್ಥವಾದ ಸಂಗತಿಯನ್ನು ತಿಳಿಯೋಣ. ಹೋಗೋಣವೆ?

ಚಿನ್ನಾದೇವಿ—ಓಹೋ, ನನಗೂ ಸಮ್ಮತವೇ.

ಕೃಷ್ಣದೇವರಾಯ—ಯಾರಲ್ಲಿ? (ಚಾರನು ಬಂದು ನಮಸ್ಕಾರ ಮಾಡುವನು.) ಪಲ್ಲಕ್ಕಿ ಸಿದ್ಧಪಡಿಸಿರಿ. ನಾವು ರಾಮಕೃಷ್ಣಯ್ಯನ ಮನೆಗೆ ಹೋಗಬೇಕು.

(ಚಾರನು ಹೋಗುವನು. ಬಳಿಕ 'ಮಾರೀಚ' ರಾಮಯ್ಯನು ವರ್ತಕರೊಂದಿಗೆ ಬರುವನು. ಮೈಮರೆತಿರುವ ಈಶ್ವರಯ್ಯನನ್ನು ಹೊತ್ತುಕೊಂಡು ಬಂದು ನೆಲದ ಮೇಲೆ ಮಲಗಿಸುವರು. ವರ್ತಕರು ಹೆದರಿಕೆಯಿಂದ ನೋಡುತ್ತಿರುವರು.)

'ಮಾರೀಚ' ರಾಮಯ್ಯ—ಮಹಾಸ್ವಾಮಿಯವರು ಪರಾಂಬರಿಸಬೇಕು.

ಕೃಷ್ಣದೇವರಾಯ—ಹೆಂಡ ಕುಡಿದವನಂತೆ ಬಿದ್ದುಕೊಂಡಿದ್ದಾನೆ. ಎಲ್ಲಿ ಅವನ ಮುಖವನ್ನು ನೋಡೋಣ, ಈ ಕಡೆ ತಿರುಗಿಸು. (ರಾಮಯ್ಯನು ಹಾಗೆಯೇ ಮಾಡುವನು.) ಆ, ಏನಿದು! ನಮ್ಮ ಅವಿಧಾನ ಈಶ್ವರಯ್ಯ! ನೀಚರೇ, ಎಲ್ಲಿ ಸಿಕ್ಕಿದ ಇವನು ನಿಮಗೆ?

೧ನೆಯ ವರ್ತಕ—ನಮಗೆ ಗೊತ್ತಿಲ್ಲ ಮಹಾಸ್ವಾಮಿ. ಇದರಲ್ಲಿ ನಮ್ಮದೇನೂ ಅಪರಾಧವಿಲ್ಲ. ನಾವು ಇಲ್ಲಿಗೆ ಹೊರಟಾಗ ಗಾಡಿಯಲ್ಲಿ ಯಾರೂ ಇರಲಿಲ್ಲ. ನಾವು ಹತ್ತಿರವಿಲ್ಲದಾಗ ಯಾರೋ ಪುಂಡರು ಈ ರೀತಿ ಮಾಡಿರಬೇಕು ಮಹಾಸ್ವಾಮಿ!

ಕೃಷ್ಣದೇವರಾಯ—ಏನೇನು, ನಿಮಗಿಂತ ಪುಂಡರೆ? ಯಾವ ದೇಶದವರು ನೀವು?

೨ನೆಯ ವರ್ತಕ—ಮಹಾಸ್ವಾಮಿ, ಗೋಲ್ಕೊಂಡದವರು. ನಮಗೆ ಈ ಊರು ಹೊಸದು ಮಹಾಸ್ವಾಮಿ, ನಮಗೇನೂ ತಿಳಿಯದು. ಇದರಲ್ಲಿ ನಮ್ಮದೇನೂ ತಪ್ಪಿಲ್ಲ.

ಕೃಷ್ಣದೇವರಾಯ—ಏನು, ತಪ್ಪಿಲ್ಲ? ತಪ್ಪಿಲ್ಲದೆ ಇವನು ಹೇಗೆ ಬಂದು ನಿಮ್ಮ ಗಾಡಿಯ ಬಳಿ ಬಿದ್ದ? ತಿಳಿಯಿತು, ನಿಮ್ಮ ಕಸಬೇನೆಂದು ಈಗ ತಿಳಿಯಿತು. ಇವನಿಗೆ ಮದ್ದು ಹಾಕಿ ಇವನ ಮೈಮೇಲಿನ ಹಣಕಾಸುಗಳನ್ನೆಲ್ಲ ಕಸುಕೊಂಡಿದೀರಿ. ಕಳ್ಳ ಕೊರಮರು ನೀವು. (೩ನೆಯ ವರ್ತಕನು ಮಾತನಾಡಲು ಯತ್ನಿಸುವನು.) ಮುಚ್ಚು ಬಾಯಿ, ಸಾಕು! ಯಾರಲ್ಲಿ? ಈ ದುಷ್ಟರನ್ನು ಹಿಂಗಟ್ಟುಮುರಿಹಾಕಿ ಬಿಗಿದು ಸೆರೆಮನೆಯಲ್ಲಿಡಿ. ಆಮೇಲಿಂದ ವಿಚಾರಿಸಿಕೊಳ್ಳೋಣ. ಈ ಮುತ್ತಾಳ ಈಶ್ವರಯ್ಯನ್ನ ತೆಗೆದುಕೊಂಡು ಹೋಗಿ ತಾವರೇಕೊಳದ ತಣ್ಣೀರಲ್ಲಿ ಮುಳುಗಿಸಿ, ಜ್ಞಾನ ಬಂದೀತು.

೩ನೆಯ ವರ್ತಕ—(ತೊದಲುತ್ತಾ) ಮಹಾಸ್ವಾಮಿ....ಅಪರಾಧ.... ಇಲ್ಲ....

ಕೃಷ್ಣದೇವರಾಯ—ತೊಲಗಾಚೆ! (ಚಾರರು ಬಂದು ವರ್ತಕರನ್ನು ಹಿಡಿದುಕೊಳ್ಳುವರು.)

ಚಾರ—ಮಹಾಸ್ವಾಮಿ, ಪಲ್ಲಕ್ಕಿ ಸಿದ್ಧವಾಗಿದೆ.

ಕೃಷ್ಣದೇವರಾಯ—ಬಾ, ಚಿನ್ನಾ, ಹೋಗೋಣ. (ಎಲ್ಲರೂ ಹೋಗುವರು.)

[ತೆರೆ ಬೀಳುವುದು.]



# ಮೂರನೆಯ ದೃಶ್ಯ

[ತೆನ್ನಾಲರಾಮಕೃಷ್ಣನ ಮನೆ, ಮೊದಲನೆಯ ದೃಶ್ಯದಲ್ಲಿದ್ದಂತೆಯೇ ; ಆದರೆ ಜಗುಲಿಯ ಮೇಲೆ ಎರಡು ಮಣೆಗಳೂ ಎರಡು ತಟ್ಟೆಗಳಲ್ಲಿ ತುಂಬ ತಿಂಡಿಯೂ ಇರುವುವು. ಗೌರಿಯು ಹಣವನ್ನೆಣಿಸುತ್ತಾ ಜಗುಲಿಯ ಮೇಲೆ ಕುಳಿತಿರುವಳು.]

ಗೌರಿ—ನೂರು ವರಹಾ! ಅಬ್ಬಾ! ಎಷ್ಟು ದಿವಸ ಕಸೂತಿ ಕೆಲಸ ಮಾಡಿದರೆ ತಾನೇ ಇಷ್ಟೊಂದು ಸಂಪಾದಿಸಬಲ್ಲೆ? ಅದಿರಲಿ, ಎಷ್ಟು ವರಹಾ ಸಂಪಾದಿಸಿಕೊಂಡು ಬಂದೆ ಎಂದು ಹೇಳಲಿ ಅವರಿಗೆ! ಇಪ್ಪತ್ತು?—ಮೂವತ್ತು?— ಇಲ್ಲ, ಇಪ್ಪತ್ತೈದು. ಉಳಿದದ್ದೆಲ್ಲಾ ಉಗ್ರಾಣದಲ್ಲಿ ಮಡಕೆಯೊಳಕ್ಕೆ ಹೋಗೋದೆ. (ಎಂದು ಒಳಗೆ ಹೋಗಿ ಹಣವನ್ನು ಬಚ್ಚಿಟ್ಟು ಬರುವಳು.) ಸರಿ. (ತಿಂಡಿಯ ಕಡೆ ನೋಡಿ) ಅವರಿಗೆ ಈ ತಿಂಡೀನೆಲ್ಲಾ ನೋಡಿಬಿಟ್ಟೇ ಸಂತೋಷವಾಗಿಬಿಡುತ್ತೆ. ನನ್ನನ್ನು ಬೇರೆ ಮಾತಾಡಿಸೋದೇ ಇಲ್ಲ ಅವರು. (ಬಾಗಿಲ ಕಡೆ ನೋಡುತ್ತಾ) ಇದೇಕೆ ಇಷ್ಟು ಹೊತ್ತಾದರೂ ಬರಲಿಲ್ಲ? ಪೇಟೇಲಿ ಏನೇನು ಕೊಂಡುಕೊಂಡು ಬರುತಾರೋ ಕಾಣೆ. ಅಗೋ, ಬಂದೇ ಬಿಟ್ಟರಲ್ಲಾ! ಏನೇನೋ ಮೂಟೆಗಳು ತರುತಾ ಇದಾರೆ! ಸದ್ಯ ನಾನು ಹಣ ಬಚ್ಚಿಟ್ಟ ಮೇಲೆ ಬಂದರಲ್ಲ.

ರಾಮಕೃಷ್ಣ—(ಎರಡು ಮೂಟೆಗಳನ್ನು ಹೊತ್ತುಕೊಂಡು ಬಂದು ಜಗುಲಿಯ ಮೇಲೆ ಹಾಕಿ) ನಿನ್ನ ಹೆಣಕ್ಕೆ ಹೊದಿಸೋ ಬಟ್ಟೆಗಳು ಪ್ರಿಯೇ!

ಗೌರಿ—ಆ, ಏನು, ಎಷ್ಟು ಧೈರ್ಯ ಅಂದರೆ ನಿಮಗೆ? ನಾನು ಸಾಯಬೇಕೆಂದೋ ನಿಮ್ಮ ಹಾರೈಕೆ?

ರಾಮಕೃಷ್ಣ—ಓ, ಇಲ್ಲ ಅಂದರೆ; ತಪ್ಪಾಯಿತು ಕ್ಷಮಿಸಿಬಿಡು. ಏನೋ ತಮಾಷೆಗೆ ಹೇಳಿದೆ, ಹೋಗಲಿ ಬಿಡು; ಬಿಡ್ತು ಅನ್ನುತೇನೆ! ಇಲ್ಲಿ ನೋಡು, (ಎಂದು ಒಂದು ಮೂಟೆಯನ್ನು ಬಿಚ್ಚುತ್ತಾ) ನಮ್ಮಿಬ್ಬರಿಗೂ ರೇಷ್ಮೆ ಬಟ್ಟೆಗಳು, ಮತ್ತೆ ಮಕಮಲ್ಲಿನ ತಲೆದಿಂಬುಗಳು. ನಿನಗೆ ಯಾವುದು ಬೇಕು? ಕೆಂಪೋ ಹಸುರೋ?

ಗೌರಿ—ನನಗೇನೂ ಬೇಡ, ನಿಮ್ಮ ತಲೆ ದಿಂಬು ನಿಮ್ಮ ತಲೇ ಮೇಲೇ ಹಾಕಿಕೊಳ್ಳಿ. (ಎಂದು ದಿಂಬನ್ನು ಕಿತ್ತು ಬಿಸುಡುವಳು.) ಮೊದಲು ಸತ್ತ ಹೆಣ ಅಂತ ನನ್ನ ಬೈಯೋದು, ಆ ಮೇಲೆ ಇದು ಬೇಕೆ, ಅದು ಬೇಕೆ, ಅಂತ ಕೇಳೋದು. ನನಗೇನೂ ಬೇಡ. (ಎಂದು ಇನ್ನೊಂದು ಮೂಟೆಯ ಕಡೆ ನೋಡಿ) ಆ ಮೂಟೇಲೇನಿದೆ ಇನ್ನು?.

ರಾಮಕೃಷ್ಣ—ಓ, ಏನೂ ಹೆಚ್ಚಾಗಿಲ್ಲ. (ಎಂದು ಆ ಮೂಟೆಯನ್ನು ತನ್ನ ಕಡೆಗೆ ಸ್ವಲ್ಪ ಎಳೆದುಕೊಳ್ಳುವನು.)

ಗೌರಿ—ನಾನು ನೋಡಬೇಕು ಅದನ್ನ.

ರಾಮಕೃಷ್ಣ—ಹಾಗೇ ಆಗಲಿ, ಫಲಾರವಾದ ಮೇಲೆ. (ತಿಂಡಿಯನ್ನು ನೋಡಿ) ಓಹೋಹೋ! ಏನು ದೊಡ್ಡ ಹಬ್ಬಾನೇ ಮಾಡಿ ಬಿಟ್ಟಿದೀಯಲ್ಲಾ !

ಗೌರಿ—ಉಹೂಂ! ಅದೆಲ್ಲಾ ಆಗೋದಿಲ್ಲ. ನಾನೀಗಲೇ ನೋಡಬೇಕು, ಆ ಮೂಟೇಲೇನಿದೆ ಅಂತ. (ಎಂದು ಆ ಮೂಟೆಯನ್ನು ತೆಗೆದುಕೊಂಡು ಬಿಚ್ಚುತ್ತಿರುವಳು.)

ರಾಮಕೃಷ್ಣ—(ಸಂಕೋಚದಿಂದ) ಏನೂ ಇಲ್ಲ.... ಕೆಲವು ಹೊಸ ಬಟ್ಟೆಗಳು, ಅಷ್ಟೆ.

ಗೌರಿ—(ಸಂತೋಷದಿಂದ) ಏನು, ನನಗೇ ?

ರಾಮಕೃಷ್ಣ—ಇ—ಇಲ್ಲ, ನ—ನನಗೆ.

ಗೌರಿ—ಏನು ! ನಿಮ್ಮಂಥಾ ಷೋಕಿಲಾಲ್ ಗಂಡಸನ್ನು ನಾನೀ ಪ್ರಪಂಚದಲ್ಲೀ ನೋಡಿಲ್ಲ ಅಂದರೆ. ನೋಡಿ ಇಲ್ಲಿ—ಕಲಾಬತ್ತಿನ ಪೇಟ, ಕಾಶಿಬುಟ್ಟಾ, ಅಂಗವಸ್ತ್ರ, ಒಬ್ಬಟ್ಟಂಚಿನ ಕಲಾಬತ್ತಿನ ಧೋತ್ರ, ಕಾಶ್ಮೀರದ ಶಾಲುಗಳು....

ರಾಮಕೃಷ್ಣ—(ಗಂಭೀರವನ್ನು ನಟಿಸುತ್ತಾ) ನೋಡು ಗೌರಿ, ಗಂಡಸು ಚೆನ್ನಾಗಿ ಲಕ್ಷಣವಾಗಿ ಕಾಣಬೇಕು. ನನ್ನ ಯೋಗ್ಯತೆ, ನನ್ನ ಗೌರವ, ಮರ್ಯಾದೆ, ದೊಡ್ಡಸ್ತಿಕೆಗೆ ಸರಿಯಾಗಿ ಬಟ್ಟೆ ಹಾಕದೆ ಹೋದರೆ ನೀನು ತಾನೇ ಒಪ್ಪಿಕೊಳ್ಳುತೀಯೋ ನನ್ನ ? (ಎಂದು ಪುಸಲಾಯಿಸಿ) ಅದಿರಲಿ, ಮೊದಲೊಂದಿಷ್ಟು ಫಲಾರಕ್ಕಿಡು ನನಗೆ. ಅತ್ತೂ ಅತ್ತೂ ಬಹಳ ಹಸಿವಾಗಿದೆ. ಮುಂಚೇನೂ ಏನೂ ತಿನ್ನಲೇ ಇಲ್ಲ ನಾನು.

ಗೌರಿ—(ಸ್ವಲ್ಪ ಮರುಕದ ನಗುವಿನಿಂದ) ಊಂ, ಹೋಗಲಿ ಬನ್ನಿ. (ಇಬ್ಬರೂ ಮಣೆಗಳ ಮೇಲೆ ಕುಳಿತುಕೊಳ್ಳುವರು. ರಾಮಕೃಷ್ಣನು ತಿಂಡಿಯನ್ನು ತಿನ್ನಲಾರಂಭಿಸುವನು. ಗೌರಿಯು ತಿನ್ನುವುದಿಲ್ಲ.) ಮಹಾರಾಜರು ನಿಮಗೆಷ್ಟು ಹಣ ಕೊಟ್ಟರು ಅಂದರೆ ?

ರಾಮಕೃಷ್ಣ—(ಉದಾಸೀನವನ್ನು ನಟಿಸುತ್ತಾ) ಏನೋ ನಾನೆಣಿಸಿಲ್ಲಾ ! ಇನ್ನೂ ಥೈಲಿ ಜೇಬಿನಲ್ಲೇ ಇದೆ. (ಎಂದು ಗೌರಿಗೆ ಕಾಣದ ಹಾಗೆ ಬರಿದಾದ ಥೈಲಿಯನ್ನು ನೋಡಿಕೊಳ್ಳುವನು.)

ಗೌರಿ—ಎಲ್ಲಿ, ನಾನು ಎಣಿಸುತೇನೆ, ಕೊಡಿ ಇಲ್ಲಿ.

ರಾಮಕೃಷ್ಣ—(ಬಾಯಿತುಂಬ ತಿಂಡಿಯನ್ನಿಟ್ಟುಕೊಂಡು ಮಾತಾಡುತ್ತಾ) ಆಮೇಲಾಗಲಿ. ಮೊದಲೊಂದಿಷ್ಟು ಹೊಟ್ಟೆಗೆ ಹಾಕಿಕೋ ಬೇಡವೆ ಗೌರಿ ನಾನು! (ಎಂದು ತಿನ್ನುತ್ತಾ "ಹೂಂ", "ಹೂಂ"! ಎಂದು ತಿಂಡಿಯ ಕಡೆ ತೋರಿಸುತ್ತಾ ಗೌರಿಯನ್ನೂ ತಿನ್ನುವಂತೆ ಹೇಳುವನು.)

ಗೌರಿ—ನನಗೇನೂ ಹಣ ಕೊಡಲೇ ಇಲ್ಲ ಮಹಾರಾಣಿಯವರು.

ರಾಮಕೃಷ್ಣ—(ಅರ್ಧ ತುಂಬಿದ ಬಾಯಲ್ಲಿ) ನಿಜವಾಗಿಯೂ?

ಗೌರಿ—ನಿಜವಾಗಿಯೂ; ಏನೋ ಒಂದಿಪ್ಪತ್ತು ವರಹಾ ಕೊಟ್ಟರು, ತಿರುಪೆ ಕೊಟ್ಟಹಾಗೆ.

ರಾಮಕೃಷ್ಣ—ಹೋಗಲಿ ಬಿಡು ಅಂದರೆ, ಆಮೇಲಿರಲಿ ಆ ವಿಚಾರವೆಲ್ಲಾ. ಮೊದಲು ಫಲಾರ ಮಾಡು. (ಎಂದು ಹೇಳುತ್ತಾ ಎರಡು ತಟ್ಟೆಗಳನ್ನೂ ತನ್ನ ಕಡೆಗೇ ಎಳೆದುಕೊಂಡು ತಿನ್ನುತ್ತಿರುವನು.)

ಗೌರಿ—(ಬಿನ್ನಾಣದ ಕೋಪದಿಂದ) ಗಂಡಸರಿಗೆ ಬೇರೆ ಇನ್ನೇನೂ ಯೋಚನೇನೆ ಇಲ್ಲ. ಯಾವಾಗಲೂ ತಿಂಡಿ, ತಿಂಡಿ.

ರಾಮಕೃಷ್ಣ—(ಗೌರಿಯ ಧ್ವನಿಯನ್ನೇ ಅನುಕರಿಸಿ ಹಲ್ಲುಕಿರಿಯುತ್ತಾ) ಮತ್ತು ಅವರ ಹೆಂಡತಿ, ಹೆಂಡತಿ! ನಿಜವಾಗಿಯೂ ಗೌರಿ, ನಾನು ಯಾವಾಗಲೂ ನಿನ್ನ ಯೋಚನೇನೆ ಮಾಡುತಾ ಇರುತೇನೆ ನೋಡು.—ಆದರೆ ಆ ಯೋಚನೆ....ಯಾವಾಗಲೂ ಒಳ್ಳೆಯದೇ ಅಂತ ಹೇಳೋಕಾಗೋದಿಲ್ಲ.

ಗೌರಿ—(ಬಿನ್ನಾಣದ ಕೋಪನಗೆಗಳಿಂದ) ನಿಮಗೆ, ಸ್ವಲ್ಪ ಕುಶಾಲ್ ಗಿಶಾಲ್....(ಹೊರಗಡೆ ಸದ್ದಾಗುವುದು. ಆಗ ರಾಮಕೃಷ್ಣನು ಅವಸರದಿಂದ ಬಾಯಲ್ಲಿ ತಿಂಡಿಯನ್ನು ತುಂಬಿಕೊಂಡು ಎದ್ದು ಕಿಟಕಿಯ ಬಳಿ ಹೋಗಿ ಹೊರಗಡೆ ನೋಡುವನು.) ಏನು ಅಂದರೆ ಅದು?

ರಾಮಕೃಷ್ಣ—(ಬಾಯಲ್ಲಿ ತಿಂಡಿಯನ್ನಿಟ್ಟುಕೊಂಡೇ ಮಾತಾಡುತ್ತಾ) ಗೌರಿ, ಗೌರಿ, ಬೇಗ, ಬೇಗ—ಮಂತ್ರಿ ತಿಮ್ಮರಸಯ್ಯ ಈ ಕಡೇನೆ ಬರುತಾ ಇದಾನೆ. ನೀನು ಮಾಡಿದ ಕೆಲಸ ಈಗ ನಮ್ಮ ಪ್ರಾಣಕ್ಕೆ ಬಂತು. ನೀನು ಸಾಯಬೇಕು ಈಗ— ಸತ್ತುಹೋಗು, ಬೇಗ ಸಾಯಿ; ಸತ್ತು ನಮ್ಮಿಬ್ಬರನ್ನೂ ಬದುಕಿಸು !....(ಎಂದು ಆ ಕಡೆ ಈ ಕಡೆ ಹಾರಾಡುತ್ತಾ ಗಲಿಬಿಲಿ ಮಾಡುವನು.)

ಗೌರಿ—(ಆಶ್ಚರ್ಯದಿಂದಲೂ ಹೆದರಿಕೆಯಿಂದಲೂ) ಅಪ್ಪಾಜಿ! ನಾನು ಸತ್ತುಹೋಗಿದೇನೆ ಅಂತ ನೀವು ಹೇಳಿದ್ದನ್ನವನು ಕೇಳಿದನೇ ?

ರಾಮಕೃಷ್ಣ—ಹೌದು. ನಿನ್ನ ಉತ್ತರಕ್ರಿಯೆಗಳ ಉಸ್ತುವಾರಿಗಾಗಿ ಮಹಾರಾಜರು ಅವನನ್ನು ಕಳಿಸಿದರೆಂದು ಕಾಣುತ್ತೆ. ಬೇಗ ಮಲಗು, ಇಲ್ಲಿ, ಈ ಜಗುಲಿಯ ಮೇಲೆ, ಹೀಗೆ, ತಲೆ ದಕ್ಷಿಣಕ್ಕೆ, ಈ ದಿಂಬಿಟ್ಟುಕೋ ತಲೇ ಕೆಳಕ್ಕೆ. (ಎಂದು ಕೆಂಪು ತಲೆದಿಂಬನ್ನು ಕೊಡುವನು.) ಹೀಗೆ, ಹೀಗೆ, ಸರಿಯಾಗಿ ಮಲಗು, ಸಾಯಿ....! (ಗೌರಿಯು ಬೇಗ ಬೇಗನೆ ತಿಂಡಿಯ ತಟ್ಟೆಯನ್ನು ಸ್ವಲ್ಪ ಹಿಂದಕ್ಕೆ ತಳ್ಳಿ, ಬಿಳಿಯ ಮುಗ್ಗುಲುಹಾಸಿಗೆಯನ್ನು ಮುಸುಕೆಳೆದುಕೊಂಡು ಮಲಗುವಳು.)

ಗೌರಿ—ಹಸುರು ದಿಂಬು ಕೊಡಿ ಅಂದರೆ, ಕೆಂಪುದು ಬೇಡ.

ರಾಮಕೃಷ್ಣ—ಅಯ್ಯೋ ರಾಮ, ಸಾಯೋವಾಗಲೂ ಸೊಗಸು ಬಿಡೋದಿಲ್ಲವಲ್ಲಾ ಈ ಹೆಂಗಸರಿಗೆ! (ಎಂದು ಹೇಳುತ್ತಾ ಹಸುರು ದಿಂಬನ್ನು ಕೊಡುವನು.)

ಗೌರಿ—(ಸರಿಯಾಗಿ, ಸತ್ತವಳಂತೆ ಮಲಗಿ) ಸರಿ, ಇನ್ನು ನಾನು ಸತ್ತಿದೇನೆ. ಆದಷ್ಟು ಬೇಗನೆ ಕಳಿಸಿಬಿಡಿ ಅವನ್ನ.

(ಜೋರಾಗಿ ಬಾಗಿಲು ತಟ್ಟಿದ ಶಬ್ದವಾಗುವುದು.)

ತಿಮ್ಮಪ್ಪಾಜಿ—(ಹೊರಗಡೆ) ಬಾಗಿಲು ತೆಗೆಯಿರಿ ಬೇಗ, ನಾನು ಮಂತ್ರಿ ತಿಮ್ಮರಸಯ್ಯ ಬಂದಿದೇನೆ. (ರಾಮಕೃಷ್ಣನು ಬಾಗಿಲನ್ನು ತೆಗೆಯುವನು. ಅಪ್ಪಾಜಿಯು ಒಳಕ್ಕೆ ಬಂದು ಬಾಗಿಲ ಬಳಿ ನಿಲ್ಲುವನು. ರಾಮಕೃಷ್ಣನು ಅಳುಮೋರೆ ಮಾಡಿಕೊಂಡು ಅವನಿಗೆ ನಮಸ್ಕಾರ ಮಾಡುವನು. ಅಪ್ಪಾಜಿಯು ರಾಮಕೃಷ್ಣನನ್ನು ಮೇಲಕ್ಕೂ ಕೆಳಕ್ಕೂ ನೋಡುತ್ತಾ ಗಂಭೀರವಾಗಿ) ರಾಮಕೃಷ್ಣ, ನೀನು ಸತ್ತಿದೀಯಾ ?

ರಾಮಕೃಷ್ಣ—ಇ-ಇ-ಇಲ್ಲ-ಸ್ವಾಮಿ.

ತಿಮ್ಮಪ್ಪಾಜಿ—ರಾಮಕೃಷ್ಣ, ನಿನ್ನ ಹೆಂಡತಿ ಸತ್ತಿದಾಳೆಯೇ ?

ರಾಮಕೃಷ್ಣ—ಹೌದು ಮಹಾಸ್ವಾಮಿ. ಅಯ್ಯೋ ಅಲ್ಲಿ ನೋಡಿ, ಹೆಣವಾಗಿ ಬಿದ್ದಿದಾಳೆ ! (ಎಂದು ಅಳುತ್ತಾ ಹೇಳುವನು.)

ತಿಮ್ಮಪ್ಪಾಜಿ—ಸುಳ್ಳು ಹೇಳೋದಿಲ್ಲ ತಾನೆ ನೀನು ?

ರಾಮಕೃಷ್ಣ—ಇ-ಇಲ್ಲ-ಸ್ವಾಮಿ. (ಮಂತ್ರಿಯು ಜಗುಲಿಯ ಬಳಿಗೆ ಹೋಗಲು ಮುಂದೆ ಅಡಿಯಿಡುವನು. ಆದರೆ ರಾಮಕೃಷ್ಣನು ಅವನನ್ನು ಹಿಂದಕ್ಕೆ ತಡೆದು) ಸ್ವಾಮಿ, ಸ್ವಾಮಿ, ಅವಳ ಮುಖ ನೋಡಬಾರದು ತಾವು. ಬದುಕಿದ್ದಷ್ಟು ದಿವಸವೂ ಯಾವ ಪರಪುರುಷನ ಮುಖಾನೂ ನೋಡಿಲ್ಲ ಅವಳು ; ನಿಮ್ಮ ದೃಷ್ಟಿ ಅವಳ ಮುಖಕ್ಕೆ ತಾಕಿದರೆ ಅವಳ ಪಾತಿವ್ರತ್ಯಕ್ಕೆ ಎಲ್ಲಾದರೂ ಭಂಗ ಬಂದೀತು—ಸತ್ತಮೇಲೂ ಕೂಡ.

ತಿಮ್ಮಪ್ಪಾಜಿ—(ತನ್ನಲ್ಲೇ ನಕ್ಕು, ಕೋಪವನ್ನು ನಟಿಸುತ್ತಾ) ನಿನ್ನ ಹೆಂಡತಿಯ ಮುಖ ನೋಡುತಾ ಕೂತುಕೊಳ್ಳೋದಕ್ಕಲ್ಲ, ಮೂರ್ಖ, ನಾನು ಬಂದದ್ದು. 'ನೀನು ಬದುಕಿದೀಯ, ಅವಳು ಸತ್ತಿದಾಳೆ' ಎಂದು ಇಷ್ಟು ತಿಳಿದರೆ ಸಾಕು ನನಗೆ. ಹೋಗುತೇನೆ.

(ತಿಮ್ಮಪ್ಪಾಜಿ ಹೋಗುವನು. ರಾಮಕೃಷ್ಣನು ಸರಕ್ಕನೆ ಬಾಗಿಲು ಹಾಕಿಬಿಟ್ಟು, ಬಂದು ಮಣೆಯ ಮುಂದೆ ಕುಳಿತು ತಿಂಡಿಯನ್ನು ತಿನ್ನಲಾರಂಭಿಸುವನು. ಗೌರಿಯೂ ಎದ್ದು ಕುಳಿತುಕೊಳ್ಳುವಳು. ಗಂಡಹೆಂಡಿರಿಬ್ಬರೂ "ಉಸ್ಸಪ್ಪಾ" ಎಂದು ಕಷ್ಟ ಕಳೆದಂತೆ ನಿಟ್ಟುಸಿರನ್ನು ಬಿಡುವರು.)

ರಾಮಕೃಷ್ಣ—ಇನ್ನಾದರೂ ಸ್ವಲ್ಪ ಸರಿಯಾಗಿ ಫಲಾರ ಮಾಡೋಣ. (ಎಂದು ತಿನ್ನುತ್ತಿರುವನು. ಅಷ್ಟರಲ್ಲಿ ಪುನಃ ಬಾಗಿಲ ಸದ್ದಾಗುವುದು.) ತಿರುಗಿ ವಿಘ್ನಬಂತಲ್ಲಾ! ಯಾರೋ ಕಾಣೆ ಈ ಅನ್ನಕಂಟಕ ಪಿಶಾಚಿ! ಗೌರಿ, ಇನ್ನು ನನ್ನ ಕೈಲಾಗೋದಿಲ್ಲ; ನೀನೇ ಎದ್ದು ಹೋಗಿ ನೋಡು, ಯಾರು ಬಂದಿದ್ದಾರೆ ಅಂತ.

ಗೌರಿ—(ಕಿಟಕಿಯಿಂದ ಹೊರಗೆ ನೋಡಿ, ಗಾಬರಿಯಿಂದ) ಅಯ್ಯೋ, ಕೆಟ್ಟೆವು ಅಂದರೆ, ಸಾಯಿರಿ ಸಾಯಿರಿ! ಮಹಾರಾಣಿಯವರು ಬಂದಿದ್ದಾಳೆ, ಸಾಯಿರಿ!

(ರಾಮಕೃಷ್ಣನು ಥಟ್ಟನೆ ನೆಗೆದು ಎದ್ದು ಜಗುಲಿಯ ಮೇಲೆ ಹೋಗಿ ಮಗ್ಗುಲು ಹಾಸಿಕೆಯನ್ನು ಮೇಲೆಳೆದುಕೊಂಡು ಬಿದ್ದುಕೊಳ್ಳುವನು. ಗೌರಿಯು ತಿಂಡಿಯನ್ನು ಸ್ವಲ್ಪ ಮರೆಯಾಗಿ ತಳ್ಳಿ ಬಾಗಿಲನ್ನು ತೆಗೆಯಲು ಹೋಗುವಳು.)

ರಾಮಕೃಷ್ಣ—ಗೌರಿ, ಗೌರಿ, ಸ್ವಲ್ಪ ತಾಳು! (ಎಂದು ಹೇಳುತ್ತಾ ಎದ್ದು ತಟ್ಟೆಯಿಂದ ಸ್ವಲ್ಪ ತಿಂಡಿಯನ್ನು ತೆಗೆದು ಬಾಯಲ್ಲಿ ತುರುಕಿಕೊಂಡು ಮಲಗುವನು.) ಹೂಂ, ಇನ್ನು ತೆಗಿ ಬಾಗಿಲನ್ನ.

(ಗೌರಿಯು ಬಾಗಿಲು ತೆಗೆಯುವಳು. ಪುಟ್ಟಮ್ಮಣ್ಣಿಯು ಒಳಗೆ ಬಂದು ಬಾಗಿಲ ಕಡೆಗೆ ನಿಲ್ಲುವಳು.)

ಗೌರಿ—(ಅಳುಮೋರೆಯಿಂದ) ಬನ್ನಿ ಅಮ್ಮಾ!

ಪುಟ್ಟಮ್ಮಣ್ಣಿ—ಈಗ ತಾನೇ ಮಹಾರಾಣಿಯವರ ಹತ್ತಿರಕ್ಕೆ ಬಂದಿದ್ದವಳು ನೀನೇ ಅಲ್ಲವೆ?

ಗೌರಿ—ಹೌದಮ್ಮಾ. ಅಯ್ಯೋ!

ಪುಟ್ಟಮ್ಮಣ್ಣಿ—ಮಹಾರಾಣಿಯವರು ನಿನಗೆ ನೂರು ವರಹಗಳ ಥೈಲಿಯೊಂದನ್ನು ಕೊಟ್ಟರಲ್ಲವೆ?

(ಈ ಮಾತನ್ನು ಕೇಳಿ ರಾಮಕೃಷ್ಣನು ಮೊಣಕೈಯೂರಿ ಅರ್ಧ ಮೇಲಕ್ಕೆದ್ದು ಮಾತು ಕೇಳುವನು. ಬಾಯಲ್ಲಿ ತಿಂಡಿಯನ್ನು ಮೆಲ್ಲುತ್ತಿರುವನು.)

ಗೌರಿ—ಹೌದು. ಆದರೆ ಆ ಹಣವೆಲ್ಲಾ ಈ ಹೆಣಕ್ಕೆ ಹೊದಿಸಿರೋ ಬಟ್ಟೆಬರೆ, ಪುರೋಹಿತರ ಮುಂಗಡ, ಇವಕ್ಕೇನೆ ಆಗಿಹೋಯಿತು.

(ರಾಮಕೃಷ್ಣನು ಮೊದಲಿನಂತೆ ಮಲಗುವನು.)

ಪುಟ್ಟಮ್ಮಣ್ಣಿ—ನಿನ್ನ ಗಂಡ ಸತ್ತುಹೋಗಿದಾನೆಯೇ?

ಗೌರಿ—ಅಯ್ಯೋ! ಅಲ್ಲಿ ನೋಡಿ, ಹೆಣ ಬಿದ್ದಿದೆ!

ಪುಟ್ಟಮ್ಮಣ್ಣಿ—ಎಲ್ಲಿ ನೋಡೋಣ. (ಎಂದು ಮುಂದಕ್ಕೆ ಹೊರಡುವಳು.)

ಗೌರಿ—(ಅವಳನ್ನು ತಡೆದು) ಅವರ ಮುಖ ನೋಡಬೇಡಿ ಅಮ್ಮಾ. ಸಾಯೋದಕ್ಕೆ ಒಂದು ಗಂಟೆ ಮುಂಚೆ ನನ್ನ ಸಂಗಡ ಏನೋ ಜಗಳವಾಡಿ 'ಇನ್ನುಮೇಲೆ ನಾನು ಖಂಡಿತವಾಗಿ ಹೆಂಗಸಿನ ಮುಖ ನೋಡೋದೇ ಇಲ್ಲ' ಎಂದು ಪ್ರಮಾಣಮಾಡಿ ಸತ್ತರು. ಬದುಕಿದ್ದಾಗಂತೂ ಏನೇನು ತಪ್ಪುಮಾಡಿದ್ದೆನೋ ಏನೋ, ಈಗ ಸತ್ತಮೇಲಾದರೂ ಅವರ ಮಾತು ನಡೆಸಿಕೊಡಬೇಡವೆ ನಾನು? ಸತ್ತಮೇಲೂ ಕೂಡ ಪ್ರತಿಜ್ಞೆ ಬಿಡತಕ್ಕವರಲ್ಲಮ್ಮಾ ನಮ್ಮವರು.—ಅಯ್ಯೋ!

ಪುಟ್ಟಮ್ಮಣ್ಣಿ—ಅದೆಂಥಾ ಪ್ರತಿಜ್ಞೆಯಮ್ಮಾ—ಶುದ್ಧ ವಿಚಿತ್ರ ಮೃಗ ನಿನ್ನ ಗಂಡ! ಹೋಗಲಿ ಬಿಡು. ಹೋಗುತೇನೆ.

(ಪುಟ್ಟಮ್ಮಣ್ಣಿ ಹೋಗುವಳು. ಗೌರಿಯು ಬಾಗಿಲು ಹಾಕುವಳು.)

ರಾಮಕೃಷ್ಣ—(ಚಂಗನೆ ಎದ್ದು, ಬಾಗಿಲ ಕಡೆ ನೋಡುತ್ತಾ) ಆ! ವಿಚಿತ್ರಮೃಗ! ಈ ಅರಮನೆ ಅವ್ವೆಯರಿಗೆ ಕೊಬ್ಬು ಹೆಚ್ಚಾಯಿತು! (ಎಂದು ಹೇಳುತ್ತಾ ಹಾರಿಬಂದು ಮಣೆಯ ಮೇಲೆ ಕುಳಿತು ತಿಂಡಿಯನ್ನು ತಿನ್ನಲಾರಂಭಿಸುವನು. ಗೌರಿಯೂ ಬಂದು ಮಣೆಯ ಮೇಲೆ ಕುಳಿತುಕೊಳ್ಳುವಳು. ರಾಮಕೃಷ್ಣನು ಗೌರಿಯ ಕಡೆ ನೋಡುತ್ತಾ, ವ್ಯಂಗ್ಯವಾಗಿ) ಅಲ್ಲ, ಗೌರಿ, ಮಹಾರಾಣಿಯವರು ನಿನಗೆ ಕೊಟ್ಟರಲ್ಲ, ಆ ನೂರು ವರಹಗಳೆಲ್ಲಾ ಖರ್ಚಾಗಿಹೋಯಿತಲ್ಲವೆ, ಆ?

ಗೌರಿ—(ಆ ಮಾತನ್ನು ಮರೆಸುವಂತೆ) ಆಂ,—ಊಂ—ಮತ್ತೆ—ಮಹಾರಾಜರು ಯಾಕೆ ಅಂದರೆ ಹಾಗೆ ಸುಮ್ಮ ಸುಮ್ಮನೆ ಮೇಲೆ ಮೇಲೆ ಆಳುಗಳನ್ನು ಕಳಿಸೋದು? (ಹೊರಗಡೆ ಸದ್ದಾಗುವುದು.) ಏನದು?

ರಾಮಕೃಷ್ಣ—ಪಲ್ಲಕ್ಕೀನೋ ಕುದುರೆ ಗಾಡೀನೋ ಇರಬಹುದು.

(ಎಂದು ಉದಾಸೀನವಾಗಿ ಹೇಳುತ್ತಾ ತಿನ್ನುತ್ತಿರುವನು.)

ಗೌರಿ—ಯಾರಾಗಿರಬಹುದು?

ರಾಮಕೃಷ್ಣ—ಯಾರೂ ಇಲ್ಲ ಕೂತುಕೊಳ್ಳೇ; ಏನೋ ಮುಳ್ಳಿನ ಮೇಲೆ ಕೂತ ಹಾಗೆ ಆಡುತಿದೀಯಲ್ಲಾ! ನಿನಗೋಸ್ಕರ, ಇನ್ನು ಬೀದೀಲಿ ಯಾರೂ ಓಡಾಡಲೇ ಬೇಡವೆ? (ಹೊರಗಡೆ ವಂದಿಗಳು "ಭೋ ಪರಾಕ್! ಮಹಾರಾಜಾಧಿರಾಜ ಶ್ರೀಕೃಷ್ಣದೇವರಾಯ ಸಾರ್ವಭೌಮರಿಗೆ ಪರಾಕ್! ಮಹಾರಾಣೀ ಚಿನ್ನಾದೇವಿಯವರಿಗೆ ಪರಾಕ್! ಭೋ ಪರಾಕ್!" ಎಂದು ಕೂಗುವರು. ಇದನ್ನು ಕೇಳಿ ರಾಮಕೃಷ್ಣನು ಗಾಬರಿಯಿಂದ) ಮಹಾರಾಜರು!

ಗೌರಿ—(ಗಾಬರಿಯಿಂದ) ಮಹಾರಾಣಿಯವರು! (ಹೊರಗಡೆ ವಂದಿಗಳು "ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶ್ವರಾ, ಭೋ ಪರಾಕ್!" ಎಂದು ತಿರುಗಿ ಹೇಳುವರು.) ಅವರು ಇಲ್ಲಿಗೇ ಬರುತಾ ಇದಾರೋ ಏನೋ?

ರಾಮಕೃಷ್ಣ—ಬರುತಾ ಇದ್ದರೆ, ನೀನು ಸಾಯಬೇಕು. ನೀನು ಸತ್ತಿದೀಯೆ ಅಂತ ನಾನು ಹೇಳಿದ್ದೆ.

ಗೌರಿ—ಇಲ್ಲ, ಇಲ್ಲ, ನೀವು ಸಾಯಬೇಕು. ನೀವು ಸತ್ತಿದೀರಿ ಅಂತ ನಾನು ಹೇಳಿದ್ದೆ.

ರಾಮಕೃಷ್ಣ—ಆಂ, ಮಹಾರಾಜರ ಕೋಪಕ್ಕೆ ನಾನು ತುತ್ತಾಗಲಾರೆ.

ಗೌರಿ—ಅಯ್ಯೋ ಇದೇನು ಹೇಡಿತನ! ನೀವೇ ಸಾಯಬೇಕು.

ರಾಮಕೃಷ್ಣ—(ಸ್ವಲ್ಪ ಯೋಚಿಸಿ) ಓ, ನಾವಿಬ್ಬರೂ ಸಾಯಬೇಕು! ನೀನು ಸತ್ತಿದೀಯಾ ಅಂತ ನಾನು ಹೇಳಿದ್ದೆ; ನಾನು ಸತ್ತಿದೇನೆ ಅಂತ ನೀನು ಹೇಳಿದ್ದೆ; ಆದ್ದರಿಂದ ನಾವಿಬ್ಬರೂ ಸಾಯಬೇಕು ಈಗ! ಆದರೆ, ನಾವು ಸತ್ತಿದೇವೆ ಅಂತ ಅವರಿಗೆ ಹೇಗೆ ಗೊತ್ತಾಗಬೇಕು? (ಸ್ವಲ್ಪ ಯೋಚಿಸಿ) ಹೂಂ, ಸರಿ, ಸರಿ, ಗೊತ್ತಾಯಿತು. ನೀನಿದೆಲ್ಲಾ ತೆಗೆದಿಟ್ಟು ಸರಿಯಾಗಿ ಸಿದ್ಧಮಾಡು ಸಾಯೋದಕ್ಕೆ. (ಎಂದು ಸರಬರನೆ ಮಣೆಯಿಂದೆದ್ದು, ಸ್ವಲ್ಪ ಹೊತ್ತು ಏನನ್ನೋ ಹುಡುಕಾಡುವವನಂತೆ ಓಡಾಡಿ ಒಳಗೆ ಹೋಗುವನು.)

ಗೌರಿ—ಬೇಗ, ಬೇಗ. (ಎಂದು ತಾನೂ ಬೇಗನೆ ಎದ್ದು ಮಣೆಗಳು, ತಿಂಡಿಯ ತಟ್ಟೆಗಳು, ಮೂಟೆಗಳು ಎಲ್ಲವನ್ನೂ ಬೇಗ ಬೇಗ ತೆಗೆದಿಟ್ಟು, ಸ್ಥಳವನ್ನು ಸರಿಮಾಡುವಳು. ಜಗುಲಿಯ ಮೇಲೆ ಚಾಪೆ ಹಾಸಿ ಎರಡು ತಲೆದಿಂಬುಗಳನ್ನೂ ಎರಡು ಬಿಳಿಯ ದುಪಟಿಗಳನ್ನೂ ಸರಿಯಾಗಿ ಇಡು

ವಳು. ಅಷ್ಟರಲ್ಲಿ ರಾಮಕೃಷ್ಣನು ಒಂದು ದೊಡ್ಡ ಬಿಳಿಯ ರಟ್ಟಿನ ಮೇಲೆ ದಪ್ಪ ಅಕ್ಷರಗಳಲ್ಲಿ "ಇಬ್ಬರೂ ಪೂರ್ತಿ ಸತ್ತಿದೇವೆ" ಎಂದು ಬರೆದುಕೊಂಡು ಬರುವನು.)

ರಾಮಕೃಷ್ಣ—ನೋಡಿಲ್ಲ, ಈ ಕಾಗದ ಪರಿಷ್ಕಾರವಾಗಿ ನಿರ್ಧರಿಸಿ ಬಿಡುತ್ತೆ ನಾವಿಬ್ಬರೂ ಸತ್ತಿದೇವೆ ಅಂತ. (ಎಂದು ಗೌರಿಗೆ ರಟ್ಟನ್ನು ತೋರಿಸಿ, ಆ ಮೇಲೆ ಅದನ್ನು ಜಗುಲಿಗೆ ಒರಗಿಸಿ ನಿಲ್ಲಿಸು ವನು.)

ಗೌರಿ—ಬನ್ನಿ, ಬನ್ನಿ, ಹೀಗೆ ಮಲಗಿ. ನನಗೆ ಹಸುರು ತಲೆ ದಿಂಬು—ಯಾವಾಗಲೂ ಹಸುರು ಬಟ್ಟೇನೆ ನನಗೆ ಚೆನ್ನಾಗಿ ಒಪ್ಪುತ್ತೆ. (ಇಬ್ಬರೂ ಮಲಗುವರು.) ಎಲ್ಲಿ, ಆ ಬಟ್ಟೆ ಸರಿ ಯಾಗಿ ಮುಸುಕೆಳೆದುಕೊಳ್ಳಿ.

ರಾಮಕೃಷ್ಣ—ಸ್ವಲ್ಪ ತಾಳು, ಆ ರಟ್ಟನ್ನು ಸರಿಯಾಗಿಟ್ಟು ಬರು ತೇನೆ. (ಎಂದು ಎದ್ದು ರಟ್ಟನ್ನು ಜಗುಲಿಯ ಬಳಿ ಸರಿಯಾಗಿ ಕಾಣು ವಂತೆ ಇಟ್ಟು, ಹಾಗೆಯೇ ಸರಕ್ಕನೆ ಒಳಗೆ ನುಗ್ಗಿ ಬಾಯಲ್ಲಿ ತಿಂಡಿ ಯನ್ನು ತುರುಕಿಕೊಂಡು ಬಂದು ಮಲಗುತ್ತಾ) ಈಗ ಸರಿಯಾ ಯಿತು. ಇನ್ನು ಸಿದ್ಧವಾಗಿದೇವೆ ನಾವು, ಸಾಯೋದಕ್ಕೆ.

ಗೌರಿ—ಏನಾದರೂ ಸರಿಯೇ, ಮಲಗಿದ ಕಡೆಯಿಂದ ಮಾತ್ರ ಕದಲಬೇಡಿ. ಅಲ್ಲದೆ ಬಾಯಿಗೀಯಿ ತೆರೆದು ಮಾತಾಡೀರಿ, ಎಚ್ಚರಿಕೆ.

ರಾಮಕೃಷ್ಣ—ಓಹೋ, ನನಗೇನು ಅಷ್ಟು ತಿಳಿಯದು ಅಂದು ಕೊಂಡೆಯೋ? ಅದೂ ಅಲ್ಲದೆ, ಉಸಿರು ಗಟ್ಟಿಯಾಗಿ ಬಿಡ ಕೂಡದು. ಈಗ ನಮ್ಮ ದೊಡ್ಡ ಪರೀಕ್ಷೇನೆ ಆಗುತ್ತೆ; ಮಹಾರಾಜರೇ ಬರುತಾರೆ ಈ ಸಲ; ಅವರು ಹಾಗೆಲ್ಲಾ ಸುಮ್ಮನೆ ಮೋಸ ಹೋಗೋರಲ್ಲ!

ಗೌರಿ—ಓಹೋ ನನಗೆ ಹೇಳಿಕೊಡಬೇಕೋ ನೀವದನ್ನ? ಆ ಮೇಲೆ, ಯಾರಾದರೂ ಕೈಕಾಲು ಮುಟ್ಟಿ, ಎಳೆದುಗಿಳೆದರೆ ಕಟ್ಟಿಗೆಯ ಹಾಗೆ ಬಿದ್ದಿರಬೇಕು. ಹೆದರಿಗಿದರಿಬಿಟ್ಟೀರಿ! ಉಸಿರು ಗಟ್ಟಿಯಾಗಿ ಬಿಗಿ ಹಿಡಿಯಬೇಕು ಆಗ, ಎಚ್ಚರಿಕೆ. ಹೂಂ, ಇನ್ನು ಸಾಯೋಣ.

(ಬಾಗಿಲು ಸದ್ದಾಗುವುದು.)

ಚಾರ—(ಹೊರಗಡೆಯಿಂದ) ತೆಗೆಯಿರಿ ಬಾಗಿಲನ್ನ, ಮಹಾಪ್ರಭು ಗಳ ಸವಾರಿ ಚಿತ್ತೈಸಿದೆ.

ರಾಮಕೃಷ್ಣ—ಮಹಾರಾಜರನ್ನ ಬಾಗಿಲಲ್ಲಿ ಕಾಯಿಸಲಾರೆ ನಾನು. (ಎಂದು ಏಳಲು ಹೋಗುವನು.)

ಗೌರಿ—(ಗಂಡನನ್ನು ಹಿಂದಕ್ಕೆ ತಳ್ಳುತ್ತಾ) ಅಯ್ಯೊ ಬೆಪ್ಪೆ! ನೀವೀಗ ಸತ್ತಿದೀರಿ!

ರಾಮಕೃಷ್ಣ—ಓ, ಹೌದು, ಹೌದು! (ಎಂದು ಮಲಗಿಕೊಳ್ಳುವನು.)

ತಿಮ್ಮಪ್ಪಾಜಿ—(ಹೊರಗಡೆ) ಬಾಗಿಲನ್ನು ಬಲವಾಗಿ ನೂಕಿಬಿಡಿ.

(ಚಾರರು ಬಾಗಿಲನ್ನು ತಳ್ಳಿಕೊಂಡು ಒಳಗೆ ಬಂದು ಒಂದು ಪಕ್ಕಕ್ಕೆ ನಿಲ್ಲುವರು. ಒಬ್ಬ ಚಾರನು ಗೌರಿ ರಾಮಕೃಷ್ಣರ ತಲೆಯ ಹತ್ತಿರದಲ್ಲಿ ಜಗುಲಿಯ ಪಕ್ಕಕ್ಕೆ ನಿಲ್ಲುವನು. ಕೃಷ್ಣದೇವರಾಯರೂ, ಚಿನ್ನಾದೇವಿಯೂ, ತಿಮ್ಮಪ್ಪಾಜಿಯೂ, ಪುಟ್ಟಮ್ಮಣ್ಣಿಯೂ ಒಳಕ್ಕೆ ಬರುವರು.)

ಕೃಷ್ಣದೇವರಾಯ—ಇದೇನೋ ಅವನ ಮನೆ?

ತಿಮ್ಮಪ್ಪಾಜಿ—ಹೌದು ಮಹಾಸ್ವಾಮಿ.

ಪುಟ್ಟಮ್ಮಣ್ಣಿ—(ಜಗುಲಿಯ ಹತ್ತಿರ ಹೋಗಿ ನೋಡಿ ಬಂದು) ಇಬ್ಬರೂ ಸತ್ತುಹೋಗಿದಾರೆ ಮಹಾಸ್ವಾಮಿ. ಗೌರಿ ಈಗ ತಾನೇ ಸತ್ತಿರಬೇಕು, ನಾನು ಇಲ್ಲಿಗೆ ಬಂದು ಹೋದ ಮೇಲೆ.

ಕೃಷ್ಣದೇವರಾಯ—ಇಬ್ಬರೂ ಸತ್ತಿಗಾರೆಯೇ!

ಚಿನ್ನಾದೇವಿ—ಇಬ್ಬರೂ ಸತ್ತಿದ್ದಾರೆಯೇ! ಅಯ್ಯೋ ಪಾಪ. ಗೌರಿಯು ಈಗ ತಾನೇ ಸತ್ತುಹೋಗಿರಬೇಕು, ಗಂಡ ಹೋದ ದುಃಖದಿಂದ ಅತ್ತೂ ಅತ್ತೂ.

ಕೃಷ್ಣದೇವರಾಯ—ಇಲ್ಲ ಇಲ್ಲ; ಅವಳೇ ಮೊದಲು ಸತ್ತವಳು. ರಾಮಕೃಷ್ಣನೇ ಅತ್ತೂ ಅತ್ತೂ ಈಗ ತಾನೇ ಸತ್ತಿರಬೇಕು. ಹೌದಲ್ಲವೇ ಅಪ್ಪಾಜಿ ?

ತಿಮ್ಮಪ್ಪಾಜಿ—ನಿಸ್ಸಂದೇಹವಾಗಿಯೂ ಮಹಾಸ್ವಾಮಿ. ನಾನು ಇಲ್ಲಿಗೆ ಬಂದಿದ್ದಾಗ ರಾಮಕೃಷ್ಣ ಇನ್ನೂ ಬದುಕಿಯೇ ಇದ್ದ.

ಚಿನ್ನಾದೇವಿ—ನಿಸ್ಸಂದೇಹವಾಗಿಯೂ ರಾಮಕೃಷ್ಣನೇ ಮೊದಲು ಸತ್ತದ್ದು. ಯಾಕೆಂದರೆ ಅವನ ಹೆಂಡತಿ ನನ್ನ ಹತ್ತಿರ ಬಂದು ಗೋಳಾಡಿದಳು.

ಕೃಷ್ಣದೇವರಾಯ—ಇಲ್ಲ ಇಲ್ಲ, ಗೌರಿಯೇ ಮೊದಲು ಸತ್ತದ್ದು. ರಾಮಕೃಷ್ಣ ನನ್ನ ಹತ್ತಿರಕ್ಕೆ ಬಂದು ಗೋಳಾಡಿದ.

ಚಿನ್ನಾದೇವಿ—ನಾನಾಗಲೇ ಹೇಳಲಿಲ್ಲವೆ ಮಹಾಸ್ವಾಮಿಯವರಿಗೆ ಭ್ರಾಂತಿ ಎಂದು ?

ಕೃಷ್ಣದೇವರಾಯ—ಪುಟ್ಟಮ್ಮ, ರಾಮಕೃಷ್ಣ ಸತ್ತದ್ದನ್ನ ನೀನು ನೋಡಿದೆಯಾ ?

ಪುಟ್ಟಮ್ಮಣ್ಣಿ—ಇ-ಇ-ಸರಿಯಾಗಿ ನೋಡಲಿಲ್ಲ ಮಹಾಸ್ವಾಮಿ.

ಚಿನ್ನಾದೇವಿ—(ದೊರೆಯ ಧ್ವನಿಯನ್ನನುಕರಿಸಿ) ಅಪ್ಪಾಜಿಯವರೇ, ಗೌರಿ ಸತ್ತದ್ದನ್ನ ನೀವು ನೋಡಿದಿರೋ ?

ತಿಮ್ಮಪ್ಪಾಜಿ—(ದೊರೆಯ ಕಡೆ ನೋಡಿ) ಇ-ಇ-ಇಲ್ಲ. ಹತ್ತಿರದಲ್ಲಿ ನೋಡಲಿಲ್ಲ.

ಕೃಷ್ಣದೇವರಾಯ—ಇದೀಗ ಬಹಳ ಚೆನ್ನಾಯಿತು.

(ಅಷ್ಟರಲ್ಲಿ ಜಗುಲಿಯ ಬಳಿ ನಿಂತಿದ್ದ ಚಾರನ ಕೈ ಅಕಸ್ಮಾತ್ತಾಗಿ ರಾಮಕೃಷ್ಣನ ಹಣೆಯನ್ನು ತಾಕುವುದು.)

ಚಾರ—ಇವರು ಸತ್ತು ತುಂಬಾ ಹೊತ್ತಾಗಿಲ್ಲ, ಮಹಾಸ್ವಾಮಿ— ಇವರ ಮೈ ಇನ್ನೂ ಬೆಚ್ಚಗೇ ಇದೆ.

ತಿಮ್ಮಪ್ಪಾಜಿ—(ಹೋಗಿ ರಾಮಕೃಷ್ಣನ ಹಣೆಯನ್ನು ಮುಟ್ಟಿ ನೋಡಿ) ಹೌದು ಮಹಾಸ್ವಾಮಿ, ಬಹಳ ವಿಚಿತ್ರವಾಗಿದೆ.

ಕೃಷ್ಣದೇವರಾಯ—(ಜಗುಲಿಯ ಬಳಿ ಇದ್ದ ರಟ್ಟನ್ನು ನೋಡಿ) ಅದೇನದು, ಅಲ್ಲಿ ಬರೆದಿರುವುದು ? (ಪುಟ್ಟಮ್ಮಣ್ಣಿಯು ರಟ್ಟನ್ನು ಸ್ವಲ್ಪ ಮುಂದಕ್ಕೆ ತಂದು ಕೈಯಲ್ಲಿ ಹಿಡಿದುಕೊಳ್ಳುವಳು. ದೊರೆ ಓದುತ್ತಾ) ಏನು—'ಇಬ್ಬರೂ ಪೂರ್ತಿ ಸತ್ತಿದೇವೆ' (ತನ್ನಲ್ಲಿಯೇ ಸ್ವಲ್ಪ ನಗುಮುಖದಿಂದ) ಹುಂ, ಪಾಪ, ಇಬ್ಬರೂ ಪೂರ್ತಿ ಸತ್ತಿದ್ದಾರಂತೆ. ಎಲ್ಲಿ, ಅಪ್ಪಾಜಿ, ರಾಮಕೃಷ್ಣನ ನಾಡಿ ಹಿಡಿದು ನೋಡಿ; ನೀನು ಪುಟ್ಟಮ್ಮ, ನೀನೂ ಹಾಗೆಯೇ ಗೌರಿಯನ್ನು ಪರೀಕ್ಷಿಸು. ನೋಡೋಣ, ಇಬ್ಬರೂ ಪೂರ್ತಿ ಸತ್ತಿದಾರೋ ಇಲ್ಲವೋ !

(ಪುಟ್ಟಮ್ಮಣ್ಣಿಯು ರಟ್ಟನ್ನು ಮೊದಲಿನಂತೆಯೇ ಇಡುವಳು. ಅವಳೂ ಅಪ್ಪಾಜಿಯೂ ದೊರೆಯ ಅಪ್ಪಣೆಯಂತೆ ಗೌರಿ ರಾಮಕೃಷ್ಣರನ್ನು ಪರೀಕ್ಷಿಸುವರು. ಆದರೆ ಅವರಿಬ್ಬರೂ ಉಸಿರನ್ನು ಗಟ್ಟಿಯಾಗಿ ಬಿಗಿಹಿಡಿದು, ಹೆಣಗಳಂತೆಯೇ ಬಿದ್ದುಕೊಂಡಿರುವರು.)

ತಿಮ್ಮಪ್ಪಾಜಿ—ಏನೂ ಸಂದೇಹವಿಲ್ಲ ಮಹಾಸ್ವಾಮಿ, ರಾಮಕೃಷ್ಣ ಪೂರ್ತಿ ಸತ್ತಿದ್ದಾನೆ; ಆದರೆ ನಾಡಿ ಮಾತ್ರ ಇನ್ನೂ ಆಡುತಾ ಇದೆ; ಮೈ ಬೆಚ್ಚಗಿದೆ ಅಷ್ಟೆ !

ಪುಟ್ಟಮ್ಮಣ್ಣಿ—ಗೌರೀನೂ ಹಾಗೆಯೇ ಮಹಾಸ್ವಾಮಿ. ನಾಡಿ ಆಡುವುದು ಮೈ ಬೆಚ್ಚಗಿರುವುದು ಇವೆರಡನ್ನು ಬಿಟ್ಟು

ಬಿಟ್ಟರೆ ಅವಳೂ ಸತ್ತ ಹೆಣದಂತೆಯೇ ಸರಿ. ಪಾಪ, ಈಗ ತಾನೇ ಸತ್ತುಹೋಗಿರಬಹುದು; ಆದ್ದರಿಂದ ಜೀವ ಇನ್ನೂ ಪೂರ್ತಿ ಶರೀರ ಬಿಟ್ಟುಬಿಡೋದಕ್ಕೆ ಇಷ್ಟವಿಲ್ಲದೆ ನಾಡೀಲಿ ಆಡುತಾ ಇದೆ ಅಂತ ಕಾಣುತ್ತೆ.

ಕೃಷ್ಣದೇವರಾಯ—ಊ, ಹೂಂ! ಪಾಪ! ಈ ರೀತಿ ಪೂರ್ತಿ ಸಾಯಬಹುದೆ ಇಬ್ಬರೂ! ವಿಚಿತ್ರವಾದ ಸಾವು, ಪಾಪ, ಯಾರಿಗೂ ಬಾರದ ಸಾವು!

(ಹೊರಗಡೆ ಗದ್ದಲವಾಗುವುದು. ಈಶ್ವರಯ್ಯನು ಬಾಗಿಲಲ್ಲಿ ನುಗ್ಗಿ ಒಳಗೆ ಬರಲು ಯತ್ನಿಸುತ್ತಿರುವನು. ಚಾರರು ಅವನನ್ನು ಹಿಂದಕ್ಕೆ ದೂಡುತ್ತಿರುವರು.)

ಈಶ್ವರಯ್ಯ—(ಬಾಗಿಲ ಬಳಿ) ನಾನು ಒಳಕ್ಕೆ ಹೋಗಿಯೇ ಹೋಗುತೇನೆ. ನನ್ನ ಹಗೆ ಸಾಧಿಸಿಯೇ ಬಿಡುತೇನೆ.

ಚಾರ—ಬಿಡೋದಿಲ್ಲ ನಿನ್ನ ಒಳಕ್ಕೆ. ಮಹಾಸ್ವಾಮಿಯವರ ಸವಾರಿ ಚಿತ್ತೈಸಿದೆ.

ಕೃಷ್ಣದೇವರಾಯ—ಏನದು ಗಲಭೆ?

ಚಾರ—ಈ ಮನೆ ಯಜಮಾನನ ಮೇಲೆ ಹಗೆ ತೀರಿಸಿಕೊಳ್ಳುತೇನೆ ಅಂತ ಹುಚ್ಚುಹುಚ್ಚಾಗಿ ಕೂಗಾಡುತಾ ನುಗ್ಗುತಾ ಇದಾನೆ ಮಹಾಸ್ವಾಮಿ, ಈ ಮನುಷ್ಯ.

(ಎಂದು ಈಶ್ವರಯ್ಯನನ್ನು ಮುಂದಕ್ಕೆ ಬಿಡುವರು.)

ಕೃಷ್ಣದೇವರಾಯ—ಸ್ವಲ್ಪಹೊತ್ತಿಗೆ ಮುಂಚೆ ವೈಮನಸ್ಯ ಬಿದ್ದುಕೊಂಡಿದ್ದ ಅವಿಮಾನ ಈಶ್ವರಯ್ಯನಲ್ಲವೇ ನೀನು?

ಈಶ್ವರಯ್ಯ—ಹೌದು ಮಹಾಪ್ರಭು. ಈ ದುಷ್ಟ ಅನುಭವಿಸುತಾನೆ ಅವರ ಫಲವನ್ನ. ಈ ಚಂಡಾಲನ್ನ ಸಿಗಿದುಹಾಕಿಬಿಡುತೇನೆ; ಚೂರು ಚೂರಾಗಿ ಕತ್ತರಿಸಿ ಹಾಕುತೇನೆ.




**ಗೌರಿ—ಹುಶ್!** ಸುಮ್ಮನೆ ಮಲಗಿ. ಈಗ ನೀವು ಸತ್ತಿದೀರಿ!

ಕೃಷ್ಣದೇವರಾಯ—ನೀನು ಸ್ವಲ್ಪ ಗೌರವ ಇಟ್ಟು ಮಾತಾಡುವು ದನ್ನು ಕಲಿಯದಿದ್ದರೆ, ನಿನ್ನನ್ನು ಸಿಗಿದು ಚೂರು ಚೂರು ಮಾಡಿಸುತ್ತೇನೆ, ತಿಳಿಯಿತೊ? ಬಿಗಿಹಿಡಿ ನಾಲಗೆಯನ್ನ.

ಈಶ್ವರಯ್ಯ—ಕ್ಷಮಿಸಬೇಕು ಮಹಾಪ್ರಭು, ಅಪರಾಧವಾಯಿತು. (ಎಂದು ಕೈಮುಗಿದು) ಆದರೆ ನನಗೆ ತುಂಬ ಅವಮಾನ ಮಾಡಿ ದಾನೆ ಈ ಮನುಷ್ಯ. ನನ್ನನ್ನ ಎಲ್ಲರೂ ನೋಡಿ ನಗೋ ಹಾಗೆ ಮಾಡಿದಾನೆ ಇವನು. ಉಪ್ಪಿನ ಮೂಟೆ ಹೇರಿದ ಹಾಗೆ ವರ್ತಕರ ಗಾಡಿಯಲ್ಲಿ ನನ್ನನ್ನು ಹೇರಿಕೊಂಡು ಹೋಗುವ ಹಾಗೆ ಮಾಡಿದಾನೆ. ಮಹಾಸ್ವಾಮಿಯವರ ಮುಂದೆ ನನ್ನ ಗೌರವ ಭಂಗವಾಗುವಂತೆ ಮಾಡಿದಾನೆ. ತಾವರೇಕೊಳದ ತಣ್ಣೀರಿನಲ್ಲಿ ಮುಳುಗಿಸೋ ಹಾಗೆ ಮಾಡಿ ದಾನೆ ಮಹಾಪ್ರಭೊ, ಆ ಚಂಡಾಲ!

ಕೃಷ್ಣದೇವರಾಯ—ಯಾರು ಇಷ್ಟೆಲ್ಲಾ ಮಾಡಿದ್ದು ನಿನಗೆ?

ಈಶ್ವರಯ್ಯ—ಯಾಕೆ, ಅವನು, ರಾಮಕೃಷ್ಣ, ಆ ಚಂಡಾಲ.

ರಾಮಕೃಷ್ಣ—(ಅರ್ಧ ಎದ್ದು) ಅವನು ಸುಳ್ಳಾಡುತಾನೆ ಮಹಾ ಪ್ರಭು!

ಗೌರಿ—ಹುಶ್! ಸುಮ್ಮನೆ ಮಲಗಿ. ಈಗ ನೀವು ಸತ್ತಿದೀರಿ! (ಎಂದು ಹಿಂದಕ್ಕೆ ಎಳೆಯುವಳು. ಉಳಿದವರು ಯಾರೂ ಇದನ್ನು ನೋಡುವುದಿಲ್ಲ.)

ಕೃಷ್ಣದೇವರಾಯ—(ಸ್ವಲ್ಪ ನಗುವಿನಿಂದ) ನೀನು ನಿನ್ನ ಅವಮಾನದ ವಿಚಾರವಾಗಿ ಪೇಚಾಡಬೇಕಾಗಿಲ್ಲ—ರಾಮಕೃಷ್ಣ ಸತ್ತು ಹೋಗಿದಾನೆ.

ಈಶ್ವರಯ್ಯ—(ಸಂತೋಷದಿಂದ) ಸತ್ತುಹೋಗಿದಾನೆಯೋ?

ಕೃಷ್ಣದೇವರಾಯ—(ರಟ್ಟಿನ ಕಡೆ ಕೈ ತೋರಿಸಿ) ನೋಡಲ್ಲಿ, 'ಇಬ್ಬರೂ ಪೂರ್ತಿ ಸತ್ತಿದೇವೆ!"

ಈಶ್ವರಯ್ಯ—ದೇವರೇ ಕೊಟ್ಟ ಅವನಿಗೆ ತಕ್ಕ ಶಿಕ್ಷೇನ.

ಕೃಷ್ಣದೇವರಾಯ—ನೀನು ಅದೃಷ್ಟವಮಾಡಿದ್ದ ಹೋಗು. ಅವರಿಗೀಗ ದಹನಾದಿ ಉತ್ತರಕ್ರಿಯೆಗಳಾಗುತ್ತವೆ.

ಈಶ್ವರಯ್ಯ—ನಾಯಿನರಿಗಳ ಪಾಲು ಮಾಡಬೇಕು ಮಹಾಸ್ವಾಮಿ.

ಕೃಷ್ಣದೇವರಾಯ—ಛೀ! ಛೀ! ಇಲ್ಲ. ಅವರಿಬ್ಬರೂ ಪಾಪ, ಸ್ವಲ್ಪವೂ ಬಾಕಿಯಿಲ್ಲದೆ ಪೂರ್ತಿ ಸತ್ತುಹೋಗಿದಾರೆ. ಅವರಿಗೆ ಶಾಸ್ತ್ರೋಕ್ತವಾಗಿ ಮಂತ್ರಾಗ್ನಿಯಿಂದಲೇ ದಹನಕರ್ಮವಾಗಬೇಕು. ಉತ್ತರಕ್ರಿಯೆಗಳನ್ನೆಲ್ಲಾ ನಮ್ಮ ಉಸ್ತುವಾರಿಯಲ್ಲಿಯೇ ಮಾಡಿಸುತೇವೆ. ಅಪ್ಪಾಜಿಯವರೇ! ಬೇಕಾದ ಸಲಕರಣೆಗಳೊಂದಿಗೆ ರಾಜಪುರೋಹಿತರನ್ನ ಬೇಗ ಬರಮಾಡಿ. ನಾವಕಾಶ ಮಾಡಬೇಡಿ, ಈಗಲೇ ಯಾರನ್ನಾದರೂ ಕಳುಹಿಸಿ.

ತಿಮ್ಮಪ್ಪಾಜಿ—ಅಪ್ಪಣೆ ಮಹಾಸ್ವಾಮಿ. (ಎಂದು ಚಾರನೊಬ್ಬನಿಗೆ ಕೆಲಸವನ್ನು ಹೇಳುತ್ತಿರುವನು. ದೊರೆಯೂ ಎಲ್ಲರೂ ಆ ಕಡೆಯೇ ನೋಡುತ್ತಿರುವರು.)

ರಾಮಕೃಷ್ಣ—(ಥಟ್ಟನೆ ಎದ್ದು ಕುಳಿತು) ಮಹಾಪ್ರಭು, ಬದುಕಿದವನನ್ನು ಸುಡಬೇಡಿ! ನನ್ನ ಹೆಂಡತಿ ಸತ್ತಿರೋದು, ನಾನಲ್ಲ!

ಗೌರಿ—(ತಾನೂ ಎದ್ದು) ಆಹಾ ಚೆನ್ನಾಯಿತು! ಬದುಕಿರುವಾಗಲೇ ಸುಡಬೇಕು ಅನ್ನುತೀರೋ ನನ್ನನ್ನ? ಸುಮ್ಮನೆ ಬಿದ್ದುಕೊಳ್ಳಿ ಅಂದರೆ! (ಎಂದು ರಾಮಕೃಷ್ಣನನ್ನು ಎಳೆದು ಮಲಗಿಸಿ, ತಾನೂ ಮಲಗುವಳು. ಮಿಕ್ಕವರು ಯಾರೂ ಇದನ್ನು ನೋಡುವುದಿಲ್ಲ.)

ಚಿನ್ನಾದೇವಿ—(ದೊರೆಯ ಕಡೆ ನೋಡಿ) ರಾಮಕೃಷ್ಣನೇ ಮೊದಲು ಸತ್ತಿದ್ದು ಎಂದು ಮಹಾಸ್ವಾಮಿಯವರಿನ್ನೂ ನಿರ್ಧರಿಸಲಿಲ್ಲ. ಹಣ ಕೊಡದ ಈ ಬಿಟ್ಟಿ ಒಡವೆಗಳನ್ನು ಭಿಕಾರಿಯಂತೆ ನಾನು ಸಾಲವಾಗಿ ಧರಿಸಲಾರೆ. (ಎಂದು ಹಾರವನ್ನು ತೆಗೆಯಲು ಹೋಗುವಳು.)

ಕೃಷ್ಣದೇವರಾಯ—ಬೇಡ, ಬೇಡ, ಸ್ವಲ್ಪ ತಾಳು. (ಎಂದು, ಎಲ್ಲರ ಕಡೆಗೂ ನೋಡಿ) ಇವರಿಬ್ಬರಲ್ಲಿ ಯಾರು ಮೊದಲು ಸತ್ತರು ಎಂದು ನಿರ್ಧರಿಸಿ ಹೇಳುವವರಿಗೆ ಒಂದು ಬಹುಮಾನ ಕೊಡುತ್ತೇನೆ. ಈ ಸಮಸ್ಯಾಪೂರ್ತಿಗೆ ದೊಡ್ಡ ಬಹುಮಾನ!

ತಿಮ್ಮಪ್ಪಾಜಿ—ನನಗೆ ಸಲ್ಲಬೇಕಾದ್ದು ಮಹಾಸ್ವಾಮಿ, ಆ ಬಹುಮಾನ. ನಾನು ನೋಡಿದಾಗ ರಾಮಕೃಷ್ಣ ಬದುಕಿಯೇ ಇದ್ದ, ಆವನ ಹೆಂಡತಿ ಸತ್ತಿದ್ದಳು.

ಪುಟ್ಟಮ್ಮಣ್ಣಿ—ನನಗೆ ಬರಬೇಕು ಮಹಾಪ್ರಭು, ಆ ಬಹುಮಾನ, ನಾನು ನೋಡಿದಾಗ ಸತ್ತಿದ್ದವನು ರಾಮಕೃಷ್ಣ, ಬದುಕಿದ್ದವಳು ಗೌರಿ.

ರಾಮಕೃಷ್ಣ—(ಚಂಗನೆ ಎದ್ದು ದೊರೆಯ ಮುಂದೆ ಬಂದು ನಮಸ್ಕಾರ ಮಾಡಿ ನಿಂತು) ನನ್ನದು ಮಹಾಸ್ವಾಮಿ ಆ ಬಹುಮಾನ. ನನ್ನ ಹೆಂಡತಿ ಸತ್ತಿದ್ದಾಳೆ, ನಾನು ಸಾಯಲೇ ಇಲ್ಲ!

ಗೌರಿ—(ತಾನೂ ಎದ್ದು ಬಂದು) ಸುಳ್ಳು, ಮಹಾಸ್ವಾಮಿ, ಸುಳ್ಳು! (ಗಂಡನ ಕಡೆ ತಿರುಗಿ) ಎಷ್ಟು ದಿನದಿಂದ ಕಲಿತಿದ್ದಿರಿ ಇಂವರೆ ಈ ಸುಳ್ಳು ಹೇಳೋದು? ನೀವು ಮೊದಲು ಸತ್ತುಹೋದಿರಿ! ಆ ಮೇಲೆ ನಾನು ಮಹಾರಾಣಿಯವರ ಹತ್ತಿರಕ್ಕೆ ಹೋಗಿ ಬಂದೆ! ನೀವು ನನಗಿಂತ ಅರ್ಧಗಂಟೆ ಮುಂಚೆ ಸತ್ತಿದೀರಿ!

(ಎಲ್ಲರೂ ಮೊದಲು ಆಶ್ಚರ್ಯದಿಂದ ನೋಡುತ್ತಿದ್ದು ತರುವಾಯ ಸಂದರ್ಭವನ್ನು ಅರ್ಥಮಾಡಿಕೊಂಡು ನಗುವರು.)

ಕೃಷ್ಣದೇವರಾಯ—(ನಗುತ್ತಾ) ನೋಡಿ ಚಿನ್ನಾದೇವಿಯವರೇ! ನನ್ನ ಸಮಸ್ಯೆಗೆ ಉತ್ತರ ದೊರೆಯಿತು. ತಮ್ಮ ಪಂಥ ಸೋತುಹೋಯಿತು! ರಾಮಕೃಷ್ಣ ಸಾಯಲೇ ಇಲ್ಲ!

ಚಿನ್ನಾದೇವಿ—(ನಗುತ್ತಾ, ದೊರೆಯ ಧ್ವನಿಯನ್ನನುಕರಿಸಿ) ಗೌರಿಯೂ ಸಾಯಲೇ ಇಲ್ಲ! ಆದರೆ ನಾನು ಹೇಳಿದ್ದೇ ಸರಿ. ಗೌರಿ ನನ್ನ ಹತ್ತಿರಕ್ಕೆ ಬಂದೇ ಇದ್ದಳು.

ಕೃಷ್ಣದೇವರಾಯ—ರಾಮಕೃಷ್ಣನೂ ನನ್ನ ಹತ್ತಿರಕ್ಕೆ ಬಂದೇ ಇದ್ದ. ಏನು ಹೇಳುತ್ತೀರಿ ಅಪ್ಪಾಜಿ, ಈ ಪಂಥದಲ್ಲಿ ಯಾರು ಗೆದ್ದವರು?

ತಿಮ್ಮಪ್ಪಾಜಿ—ಮಹಾಪ್ರಭು....

ಚಿನ್ನಾದೇವಿ—ಎಚ್ಚರಿಕೆಯಿಂದ ಮಾತಾಡಿ ಅಪ್ಪಾಜಿಯವರೇ!

ಕೃಷ್ಣದೇವರಾಯ—ಹಿಂದುಮುಂದಾಲೋಚಿಸಿ ಮಾತಾಡಿಅಪ್ಪಾಜಿ!

ತಿಮ್ಮಪ್ಪಾಜಿ—(ನಗುತ್ತಾ) ಹಾಗಾದರೆ—ಹಾಗಾದರೆ—ಮಹಾಸ್ವಾಮಿ, ತಾವಿಬ್ಬರೂ ಗೆದ್ದಿದ್ದೀರಿ, ಇಬ್ಬರು ಹೇಳಿದ್ದೂ ಸರಿಯೇ! ಅಲ್ಲದೆ ಮಹಾರಾಜರಾಗಲಿ, ಮಹಾರಾಣಿಯವರಾಗಲಿ ತಮ್ಮಿಬ್ಬರಲ್ಲಿ ಯಾರು ತಾನೆ ಸೋಸಹೋದೀರಿ ಮಹಾಸ್ವಾಮಿ!

ಕೃಷ್ಣದೇವರಾಯ—ಇದೀಗ ಚಾತುರ್ಯದ ಮಾತು. ಒಳ್ಳೆ ಉಪಾಯಶಾಲಿಗಳು ನೀವು, ಅಪ್ಪಾಜಿ. ಸರಿ, ಆ ಒಡವೆಗಳ ಬೆಲೆಯನ್ನ ನಮ್ಮ ಸ್ವಂತ ಖಜಾನೆಯಿಂದ ಮಹಾರಾಣಿಯವರಿಗೆ ಕಳುಹಿಸಿಕೊಡಿ. (ಎಂದು ಮಹಾರಾಣಿಯ ಕಡೆ ನೋಡಿ

ನಗುತ್ತಾ) ಆದರೆ ಮಾತ್ರ, ಚಿನ್ನಾದೇವಿಯವರೇ, ಇನ್ನೇಂದೆಂದಿಗೂ ಮೊಂಡತನದಿಂದ ನಮಗೆ ಎದುರಾಡಬಾರದು, ಕಂಡಿರೋ! (ಗೌರಿ ರಾಮಕೃಷ್ಣರ ಕಡೆ ನೋಡಿ) ಇನ್ನು ಈ ತುಂಟರ ವಿಚಾರ ಏನು ಮಾಡೋಣ? (ಆಗ ಈಶ್ವರಯ್ಯನು ರಾಮಕೃಷ್ಣನಿಗೆ ಮಾತ್ರ ಕಾಣಿಸುವ ಹಾಗೆ ಕತ್ತು ಕತ್ತರಿಸುವಂತೆ ತೋರಿಸುವನು. ರಾಮಕೃಷ್ಣನು ಸೊಟ್ಟಮೋರೆ ಮಾಡುವನು. ಗೌರಿಯು ಮುಂದಕ್ಕೆ ಬಂದು ಮಾತಾಡುವಳು.)

ಗೌರಿ—(ವಿನಯದಿಂದ) ಮಹಾಸ್ವಾಮಿಯವರು ಈ ಸಾವಿನ ಸಮಸ್ಯೆಯನ್ನು ಪೂರ್ತಿ ಮಾಡಿದವರಿಗೆ ದೊಡ್ಡ ಬಹುಮಾನವನ್ನು ದಯಪಾಲಿಸುತ್ತೇವೆಂದು ಅಪ್ಪಣೆ ಕೊಡಿಸಲಿಲ್ಲವೆ?

ಕೃಷ್ಣದೇವರಾಯ—ಹೌದು, ಹೇಳಿದ್ದುಂಟು.

ಗೌರಿ—ಹಾಗಾದರೆ, ಮಹಾಸ್ವಾಮಿಯವರ ಬಹುಮಾನ ನನಗೆ ಸೇರತಕ್ಕದ್ದು. ಯಥಾರ್ಥವಾದ ಸಂಗತಿಯನ್ನೆಲ್ಲಾ ತಮಗೆ ತಿಳಿಸಿಬಿಟ್ಟು ಈ ಸಾವಿನ ಸಮಸ್ಯೆಯನ್ನು ನಾನು ಪೂರ್ತಿ ಮಾಡುತೇನೆ. ಮಹಾಸ್ವಾಮಿಯವರು ನಮ್ಮಿಬ್ಬರ ತಪ್ಪನ್ನೂ ಮನ್ನಿಸಿದರೆ ಅದೇ ನಮಗೆ ದೊಡ್ಡ ಬಹುಮಾನ.

ಕೃಷ್ಣದೇವರಾಯ—(ಮಹಾರಾಣಿಯ ಕಡೆ ನೋಡಿ, ನಗುತ್ತಾ) ಸ್ತ್ರೀಜಾತಿಗೆ ಸಹಜವಾದ ಚಮತ್ಕಾರವಲ್ಲವೇ ಚಿನ್ನಾ! (ಗೌರಿಯನ್ನು ಕುರಿತು) ಹಾಗೆಯೇ ಆಗಲಿ, ನಿಮ್ಮಿಬ್ಬರನ್ನೂ ಮನ್ನಿಸಿದೇವೆ. ಅಪ್ಪಾಜಿ! ಇವರಿಬ್ಬರಿಗೂ, ನಮಗೆಲ್ಲಾ ಈ ಗಹನವಾದ ಸಾವಿನ ಸಮಸ್ಯೆಯನ್ನು ಕೊಟ್ಟದ್ದಕ್ಕೂ, ತಿರುಗಿ ಆ ಸಮಸ್ಯೆಯನ್ನು ತಾವೇ ಪೂರ್ತಿ ಮಾಡಿದ್ದಕ್ಕೂ ತಲಾ ಐದೈದು ಸಾವಿರ ವರಹಾ ನಮ್ಮ ಭಂಡಾರದಿಂದ

ಕೊಡಿಸಿಬಿಡಿ. ಆಗ ಈ ಸಾವಿನ ಸಮಸ್ಯೆಯಲ್ಲದೆ, ನಿಜವಾದ ಇವರ ಬದುಕಿನ ಸಮಸ್ಯೆಯೂ ಪೂರ್ತಿಯಾಗುವುದು.

ಚಿನ್ನಾದೇವಿ—ನನ್ನದೊಂದು ಬಹುಮಾನವಿದೆ ಮಹಾಸ್ವಾಮಿ. ಇನ್ನು ಮೇಲೆ ಈ ರಾಮಕೃಷ್ಣಯ್ಯ ನಿಮ್ಮ ಆಸ್ಥಾನದ "ಅಷ್ಟದಿಗ್ಗಜ" ಗಳಲ್ಲೊಂದಾಗಿ ವಿದೂಷಕ ಶಿಖಾಮಣಿಯಾಗಿರಲಿ. ಹಾಗೆಯೇ ಈ ಗೌರಿಯೂ ನಮ್ಮ ಅಂತಃಪುರದ ಆಸ್ಥಾನಕ್ಕೆ ಹಾಸ್ಯಕವಿರತ್ನವಾಗಿರಲಿ. ಇನ್ನು ಮೇಲೆ ನಮ್ಮಿಬ್ಬರಿಗೂ ಏನಾದರೂ ಪಂಥ ಗಿಂಥ ಬಿದ್ದರೆ ಈ ನಮ್ಮ ಹುಂಜಗಳನ್ನೇ ಬಿಡೋಣ ರಂಗಕ್ಕೆ, ಆಗ ನೋಡೋಣ, ಯಾರು ಗೆಲ್ಲುವರೋ! (ಎಂದು ಗೌರಿಯ ಕಡೆ ನೋಡಿ ನಗುವಳು.)

ಕೃಷ್ಣದೇವರಾಯ—ಏನಯ್ಯಾ ರಾಮಕೃಷ್ಣ! ಸಮ್ಮತವೋ ನಿನಗೆ? (ರಾಮಕೃಷ್ಣನು ಅತಿ ವಿನಯದಿಂದ ಹಲ್ಲುಕಿರಿಯುತ್ತಾ ಕೃತಜ್ಞತೆಯನ್ನೂ ಸಂತೋಷವನ್ನೂ ತೋರಿಸುವನು.) ಅದಿರಲಿ, ಎಲ್ಲರೂ ಸಾವು, ಸಾವು ಎಂದು ಹೆದರುತಾರಲ್ಲಾ, ನೀನು ಬದುಕಿರುವಾಗಲೇ ಆ ಸಾವಿನ ಸುಖ, ಸಾವಿನ ಬೆಲೆ, ಸಾವಿನ ಲಾಭ ಎಲ್ಲಾ ಕಂಡುಕೊಂಡುಬಿಟ್ಟೆಯಲ್ಲಾ! ಒಳ್ಳೆ ಗಟ್ಟಿಗ ಕಾಣಯ್ಯ! ಹೋಗಲಿ, ನೀನು ಗ್ರಹಿಸಿರುವ ಸಾವಿನ ಸಾರಾರ್ಥವೇನು ಹೇಳು?

ರಾಮಕೃಷ್ಣ—(ಕೈ ಬೆರಳುಗಳನ್ನು ಮಡಿಸುತ್ತಾ, ತನ್ನಲ್ಲಿ) ಒಂದು ನೂರು ಒಂದು ಇನ್ನೂರು, ಮುನ್ನೂರು, ಆಮೇಲೆ ತಲಾ ಐದೈದು ಸಾವಿರ, ಹುಂ, ಸರಿ, (ಎಂದು ದೊರೆಯ ಕಡೆಗೆ ತಿರುಗಿ) ಹತ್ತುಸಾವಿರದ ಮುನ್ನೂರು ವರಹಾ, ಮಹಾಪ್ರಭು! (ಎಂದು ಹೇಳಿ ಬಾಗಿ ನಮಸ್ಕಾರಮಾಡುವನು. ಎಲ್ಲರೂ ನಗುವರು.)

[ತೆರೆ ಬೀಳುವುದು.]

--- ೨೫೦ ---